## ಮಿಲನ ಮುಹೂರ್ತ

I

ವಾಸವದತ್ತೆಯು ಸೌಂದರ್ಯವು ಪೂರ್ಣಚಂದ್ರನನ್ನೂ ಹೀಯಾಳಿ
ುವಂತಿತ್ತು. ಅವಳ ದೇಹವು ಕಮಲಕ್ಕಿಂತ ಕೋಮಲವಾಗಿತ್ತು.
ವಳ ವಾಣಿಯು ವೀಣೆಯ ಧ್ವನಿಯನ್ನು ತಿರಸ್ಕರಿಸುವಂತಿತ್ತು. ಅವಳ
ಜ್ಜಾಯುಕ್ತ ಕಂಗಳು ಹರಿಣಿಗಳನ್ನು ನಾಚಿಸುತ್ತಿತ್ತು. ಸ್ವರ್ಗ
ೌಂದರ್ಯ ದೇವತೆಯೇ ಸ್ವತಃ ತನ್ನ ಅಭಿರುಚಿಗೆ ಅನುಗುಣವಾಗಿ ಆ
ಜೀವ ಸ್ವರ್ಣಪ್ರತಿಮೆಯನ್ನು ರಚಿಸಿತ್ತು. ಇಂತಹ ಭುವನ ಮೋಹಿನಿ
ೋಭಾ—ಇಂತಹ ರುಚಿ-ರ ರೂಪರಾಶಿಗಳಿಂದ ನಿರ್ಮಿಸಿದ ಬ್ರಹ್ಮ
ೇವನು ಅವಳನ್ನು ವೇಶ್ಯೆಯಾಗಿ ಮಾಡಿದುದು ಉಚಿತವೇ? ಕೆಸರಿನಲ್ಲಿ
ಮಲ, ಮುಳ್ಳಿನಲ್ಲಿ ಹೂಗಳನ್ನು ನಿರ್ಮಿಸಿದ ಅವನಿಗೆ ಗೊತ್ತು!

ವಸಂತ ಸುಷುಮಾ ಪ್ರಪೂರ್ಣ ಪ್ರಭಾತ. ಕೋಗಿಲೆಗಳ
ಮಧುರ ಕಂಠದ ನಿನಾದ. ಮಂದಮಲಯ ಸುರಭಿಯ ಸುಳಿವು.
ಒಬ್ಬ ಬೌದ್ಧ ಭಿಕ್ಷುವು ವಾಸವದತ್ತೆಯು ಮಹಾಲಯದ ದ್ವಾರದ
ಮುಂದೆ ಕೈನೀಡಿ ನಿಂತಿರುವನು. ಅಕಸ್ಮಾತ್ ಅವನ ಮೇಲೆ ವಾಸವ
ದತ್ತೆಯ ದೃಷ್ಟಿ ಬಿತ್ತು. ಅವಳ ಕಣ್ಗಳು ಅವನನ್ನು ಒಂದು ಬಾರಿ
...ರು ಬಾರಿ ನೋಡಿದವು, ನೋಡುತ್ತಲೇ ಇದ್ದವು.

...ು ಉಪಗುಪ್ತ. ಸಂಸಾರಿಕ ದೃಷ್ಟಿಯಲ್ಲಿ ಅವನೊಬ್ಬ
...ರ್ಗೀಯ ದೃಷ್ಟಿಯಲ್ಲಿ ರಾಜರಾಜೇಶ್ವರ. ಮನಸ್ಸಿ
...ತ್ತ ಸುವಿಸ್ತೃತ ರಾಜ್ಯ ಬೇರೊಂದಿಲ್ಲ. ಉಪಗುಪ್ತ
...ಸಾಮ್ರಾಜ್ಯವನ್ನು ತನ್ನ ಅಧೀನ ಮಾಡಿಕೊಂಡಿದ್ದನು.
ಅವನು ರಾಜೇಶ್ವರನಾಗಿದ್ದನು, ಸಮಸ್ತ ಇಂದ್ರಿಯಗಳು ಅವನ ಪ್ರಜೆ
ಗಳಾಗಿದ್ದವು.

ವಿಶ್ವದ ಚಂಚಲತೆ ಮತ್ತು ಅಶಾಂತಿಯ ತಿಳುವಳಿಕೆ ಚೆನ್ನಾಗಿತ್ತು ಅವನಿಗೆ. ಅವನ ಕಣ್ಣು ಅಚಂಚಲ ಮತ್ತು ಶಾಂತತೆಯಿಂದಿದ್ದವು. ಸ್ವರ್ಗೀಯ ದಿವ್ಯತೇಜಸ್ಸಿನಿಂದ ಮುಖಮಂಡಲವು ಪ್ರಕಾಶಿಸುತ್ತಿತ್ತು. ಕಾಷಾಯವಸ್ತ್ರಗಳು ಅಪೂರ್ವ ಶೋಭೆಯನ್ನೀಯುತ್ತಿದ್ದುವು.

ಪ್ರಪಂಚವನ್ನು ತನ್ನ ಸೌಂದರ್ಯದಿಂದ ಪರಾಜಿತಗೊಳಿಸುತ್ತಿದ್ದ ವಾಸವದತ್ತೆ ಆ ಭಿಕ್ಷುವನ್ನು ನೋಡಿ ಸೋತಳು. ಅವನ ಸೌಂದರ್ಯಕ್ಕೆ ಮುಗ್ಧಳಾದಳು. ಅವಳ ಮೊಗದೆರೆ ಜಾರಿಬಿತ್ತು. ಮುಡಿ ಸಡಲಿತು. ಮುಡಿಯನ್ನಲಂಕರಿಸಿದ್ದ ಪುಷ್ಪರಾಶಿಯು ಜಾರಿ ಕೆಳಗೆ ಬಿದ್ದವು.

ಅವಳು ಉಪಗುಪ್ತನನ್ನು ಸಮೀಪಿಸಿ— ಭಿಕ್ಷು, ಭಿಕ್ಷಾಪಾತ್ರೆಯನ್ನು ಮುಂದೆ ನೀಡು!

ಭಿಕ್ಷಾಪಾತ್ರೆಯನ್ನು ಮುಂಚಾಚಿ ಹಿಡಿಯುತ್ತಾ ತಕ್ಷಣ ಆಶ್ಚರ್ಯದಿಂದ ಉಪಗುಪ್ತ— ಆದರೆ ನಿನ್ನ ಎರಡು ಕೈಗಳೂ ರಿಕ್ತವಾಗಿವೆ. ಇವು ನನಗೇನು ನೀಡಬಲ್ಲುವು?

ವಾಸವದತ್ತಾ— ಈ ಸಂಸಾರದಲ್ಲಿ ಇನ್ನೆಲ್ಲಿಯೂ ನಿನಗೆ ದೊರೆಯದ್ದದನ್ನು ಮತ್ತು ಈ ಕೈಗಳು ಇದುವರೆಗೆ ಇನ್ನಾರಿಗೂ ಪ್ರದಾನ ಮಾಡದೇ ಇರುವುದನ್ನು ಕೊಡುತ್ತದೆ. ಭಿಕ್ಷು!

ಉಪಗುಪ್ತ— ಅರ್ಥಾತ್!

ವಾಸವದತ್ತಾ— ಈ ಕೈಗಳು ರಿಕ್ತವಾದವುಗಳಲ್ಲ.

ಉಪಗುಪ್ತ— ನಾನು ಈ ಸ್ವರ್ಣಭೂಷಣಗಳನ್ನು ತೆಗೆದುಕೊಂಡು ಏನು ಮಾಡಲಿ!

ವಾಸವದತ್ತಾ— ಸ್ವರ್ಣ ಭೂಷಣಾದಿಗಳ ಮಾತಲ್ಲ-ಅಬೋಧ ಯುವಕ. ಇವು ರಿಕ್ತವಾಗಿಲ್ಲ. ಇವು ಪ್ರೇಮಾಲಿಂಗನದಿಂದ ಪರಿಪೂರ್ಣವಾಗಿವೆ. ನಾನು ಆ ಆಲಿಂಗನವನ್ನು ನಿನಗೆ ನೀಡುತ್ತೇನೆ. ಕಲ್ಪನೆ ಮಾಡಬಲ್ಲೆಯಾ ಭಿಕ್ಷು! ದೊಡ್ಡ ದೊಡ್ಡ ರಾಜೇಶ್ವರರು ಯಾವ ವಾಸವದತ್ತೆಯ ಕೇವಲ ಛಾಯಾಸ್ಪರ್ಶಕ್ಕಾಗಿ ವ್ಯಾಕುಲರಾಗಿರುತ್ತಾರೋ ಅಂತಹ ವಾಸವದತ್ತೆಯೇ ನಿನಗೆ ಪ್ರೇಮಾಲಿಂಗನವನ್ನು ಕೊಡುತ್ತೇನೆ.

ಉಪಗುಪ್ತನ ಮುಖಭಾವದಲ್ಲಿ ಎಳ್ಳಷ್ಟಾದರೂ ಪರಿವರ್ತನವಾಗ

ಲಿಲ್ಲ. ವಾಸವದತ್ತೆಯು ಪುನಃ ಹೇಳಿದಳು—ಭಿಕ್ಷು ಪಾತ್ರೆಯನ್ನು ಮುಂದೆ ನೀಡು. ಭಿಕ್ಷಕ್ಕಾಗಿ ನನ್ನ ಹೃದಯವನ್ನು ಕೊಡುತ್ತೇನೆ.

ಉಪಗುಪ್ತ—ಇದರ ಅರ್ಥ!

ವಾಸವದತ್ತಾ—ಇದರ ಅರ್ಥ! ಈ ನನ್ನ ಸುಕುಮಾರ ಶರೀರವು ಭಿಕ್ಷುವೃತ್ತಿಗಾಗಿ ಅಲ್ಲ. ಈ ಅನುಪಮ ಸೌಂದರ್ಯ ಸುಮನವು ಸಂಸಾರದ ಸ್ಪರ್ಶದಿಂದ ದೂರ ವನಪಥದಲ್ಲಿ ಬಾಡಿ ಹೋಗುವುದಕ್ಕಲ್ಲ. ಬಾ, ಭಿಕ್ಷು, ನನ್ನ ಮನೆಯ ಒಳಗಡೆ. ನಾನು ವಿಶ್ವಸ್ವಾಮಿನಿ. ನಿನ್ನ ದಾಸಿಯಾಗುತ್ತೇನೆ.

ಉಪಗುಪ್ತನ ಮುಕ್ತ ಮುಖ ಮಂಡಲದಲ್ಲಿ ವಾಸನಾ ಪ್ರಭಾವದಿಂದ ನಗುವಿನ ರೇಖೆಯೊಂದು ಸುಳಿಯಿತು. ಅವನು ಸುಮ್ಮನಿದ್ದನು.

ವಾಸವದತ್ತೆಯು ವಿಕಲಳಾಗಿ—ಉತ್ತರ ಕೊಡು ಭಿಕ್ಷು ಏಕೆ ಸುಮ್ಮನಾದೆ?

ಉಪಗುಪ್ತ—ಆದರೆ ಹಲವು ಕಾರಣಗಳಿಂದ ಇನ್ನು ಸಮಯವಿದೆ.

ವಾಸವದತ್ತಾ—ಯಾವಾಗ?

ಉಪಗುಪ್ತ—ಸ್ವಲ್ಪ ದಿನಗಳು ಕಳೆಯಲಿ, ನಂತರ ಬರುತ್ತೇನೆ. "ಸ್ವಲ್ಪ ದಿನಗಳ ನಂತರ ಬರುತ್ತೇನೆ." . ವಾಸವದತ್ತೆಯು ಮನಸ್ಸಿನಲ್ಲಿಯೇ ಯೋಚಿಸ ತೊಡಗಿದಳು. "ರಮಣಿಯ ರೂಪಕ್ಕೆ ಅವಮಾನ" ಒಬ್ಬ ಸಾಮಾನ್ಯ ಭಿಕ್ಷುವಿನಿಂದ ಸೌಂದರ್ಯದ ತಿರಸ್ಕಾರವೇ! ನೋಡೋಣ ನಾನು ಆ ದಿನದ ಪ್ರತೀಕ್ಷೆ ಮಾಡುತ್ತಿರುತ್ತೇನೆ.

II

ಸಂಧ್ಯೆಯು ತನ್ನ ಅಲ್ಪ ಜೀವನದಲ್ಲಿ ಅಲ್ಪಕಾಲ ಮಿಂಚಿ ತೀವ್ರಗತಿಯಲ್ಲಿ ಹೊರಟು ಹೋಗಿದ್ದಳು. ಶರದೃತುವಿನ ಶುಭ್ರಾಕಾಶದ ಅಂಚಿನಲ್ಲಿ ಉದನ್ಮುಖನಾಗಿದ್ದ ಚಂದ್ರನು (ರಜನೀಕಾಂತ) ತನ್ನ ರೂಪೋಜ್ವಲ ಮಂದ ಕಿರಣಗಳನ್ನು ಚಾಚಿದ್ದನು.

ನಿಬಿಡವಾದೊಂದು ಆರಣ್ಯ ಚರಣವನ್ನು ಸ್ಪರ್ಶಿಸುತ್ತಿತ್ತು. ಕಲಕಲನಿನಾದದೊಡನೆ ಗಂಗೆಯು ಹರಿಯುತ್ತಿದ್ದಳು. ಅಂದಿನ ದಿನದ

ಭಿಕ್ಷಾಭಾರಯುಕ್ತನಾಗಿ ಉಪಗುಪ್ತನು ಆ ವನದ ಮಾರ್ಗವಾಗಿ ಮಠಕ್ಕೆ ಹೋಗುತ್ತಿದ್ದನು.

ಆ ಭಯಂಕರ ಹಿಂಸ್ರಪಶು ಸಿಂಹದ ಮೇಲೆ ಕರುಣಾವತಾರಿ ಬುದ್ಧನ ಉಪದೇಶವು ಸ್ವಲ್ಪವೂ ಪರಿಣಾಮಕಾರಿ ಯಾಗಿರಲಿಲ್ಲ. ಅದರ ರಾಕ್ಷಸ ಪ್ರವೃತ್ತಿಯಲ್ಲಿ ಪರಿವರ್ತನವಾಗಲಿಲ್ಲ. ಉಪಗುಪ್ತನ ಬರುವಿಕೆ ಯನ್ನು ಕಂಡು ಅವನ ಮೇಲೆ ಹಾರಲು ಸಿದ್ಧವಾಗಿತ್ತು. ಇದನ್ನರಿತ ಭಿಕ್ಷುವು ತನ್ನ ತಲೆಯನ್ನು ಬಾಗಿಸಿದನು.

ಒಂದುಕಡೆ (ಒಂದೆಡೆ) ಸಿಂಹವು ಉಪಗುಪ್ತನನ್ನು ಭಕ್ಷಿಸಲು ಸಿದ್ಧ ವಾಗಿದೆ. ಇನ್ನೊಂದೆಡೆ ಉಪಗುಪ್ತನು ಸಿಂಹಕ್ಕೆ ಆಹಾರವಾಗಿ ನಿಂತಿ ದ್ದಾನೆ.

ಸಮೀಪದಲ್ಲೇ ಒಂದು ದೊಡ್ಡ ಮರ. ಮರದಲ್ಲಿ ಒಂದು ಪೊಟ್ಟರೆ ಯಿತ್ತು. ಅಲ್ಲಿ ಕುಳಿತಿದ್ದ ಒಬ್ಬ ಬೇಡನು ಈ ದೃಶ್ಯವನ್ನು ನೋಡಿ ದನು. ತಕ್ಷಣ ಅಂಬೊಂದನ್ನು ಅದರೆಡೆಗೆ ಬಿಟ್ಟನು.

ಚಕಿತನಾಗಿ ಉಪಗುಪ್ತನು ಸುತ್ತಲೂ ನೋಡಿದನು. ಸ್ವಕಾರ್ಯ ದಲ್ಲಿ ಸಫಲತೆಯನ್ನು ಹೊಂದಿದ್ದ ಬೇಡನು ಮುಗುಳುನಗೆ ನಗುತ್ತಾ ಅವನ ಹತ್ತಿರ ಬರುತ್ತಿದ್ದನು. ಭಿಕ್ಷುವು ದುಃಖಭರಿತನಾಗಿ— ಹಾಯ್! ಇದೇನನ್ನಾಚರಿಸಿದೆ! ಸಿಂಹವು ನಿನಗೇನು ತೊಂದರೆ ಕೊಟ್ಟಿತು? ಅಕಾರ ಣವಾಗಿ ನಿರಪರಾಧಿಯಾದ ಪ್ರಾಣಿಯ ಹತ್ಯೆಯನ್ನೇಕೆ ಮಾಡಿದೆ?

ಬೇಡನು ತನ್ನಲ್ಲೇ ಯೋಚಿಸಿದನು—"ಸಿಂಹ—ನಿರಪರಾಧ!" ದಯಾಹೀನ ಕಠೋರ ಜೀವನದಲ್ಲಿ ಇಂತಹ ಕರುಣಾಮೂರ್ತಿಯನ್ನು ಕಂಡುದು ಇದೇ ಪ್ರಥಮ. ಚಿತ್ರಾಂಕಿತ ಮೂರ್ತಿಯಂತೆ ಸ್ವಲ್ಪ ಹೊತ್ತು ನಿಂತಿದ್ದನು. ಉಪಗುಪ್ತನು ಕರುಣಾಭರಿತ ದೃಷ್ಟಿಯನ್ನೊಮ್ಮೆ ಅವನ ಮೇಲೆ ಬೀರಿದನು. ಕಣ್ಣುಗಳು ಪರಸ್ಪರ ನೋಡಿದುವು.

ಬೇಡನು ತನ್ನ ಬಾಣಬತ್ತಳಿಕೆಗಳನ್ನು ಹೆಗಲಿನಿಂದ ತೆಗೆದು ಗಂಗೆಯ ವಕ್ಷದಲ್ಲಿ ಎಸೆದನು. ಅವನ ನಿರ್ದಯತೆಯು ಗಂಗೆಯಲ್ಲಿ ಮುಳುಗಿ ಹೋಯಿತು. ತನ್ನ ಬಲಿಷ್ಠ ಕೈಗಳಿಂದ ಬಿಲ್ಲನ್ನು ಎರಡು ತುಂಡರಿಸಿದನು. ಅವನ ಕಠೋರತೆಯು ಅಂತಿಮ ಶ್ವಾಸವನ್ನೆಳೆಯಿತು.

ನಂತರ ಬೇಡನು ಭಿಕ್ಷುವಿನ ಕಾಲ್ಗಳ ಮೇಲೆ ಬಿದ್ದು - ದೇವಾ! ಇದೇ ನನ್ನ ಅಂತಿಮ ಹತ್ಯೆ.

ಉಪಗುಪ್ತನು ಪ್ರಸನ್ನ ಮುಖದಿಂದ ಆಶೀರ್ವದಿಸಿದನು. ಬೇಡನು ತನ್ನ ನವೀನ ಪ್ರಪಂಚಕ್ಕೆ ಪ್ರವೇಶಿಸಲು ಹೊರಟು ಹೋದನು. ಕರುಣೆಯು ಅವನ ಪಥ ಪ್ರದರ್ಶಕವಾಯ್ತು. ದಯಾರ್ದ್ರ ಉಪಗುಪ್ತನು ಭೂಶಾಯಿ ಸಿಂಹದ ಕಡೆಗೆ ನೋಡಿದನು. ಅದರ ಎದೆಯಲ್ಲಿ ಅಂಬೊಂದು ತೀಕ್ಷ್ಣವಾಗಿ ನಾಟಿತ್ತು. ಭಿಕ್ಷುವು ಅತಿ ಪ್ರಯಾಸದಿಂದ ಅದನ್ನು ಗಂಗಾ ತಟದ ಕಡೆಗೆ ಸಾಗಿಸಿ, ಅದರ ಗಾಯಗಳನ್ನು ತೊಳೆಯ ತೊಡಗಿದನು.

ಗಂಗೆಯ ಚಂಚಲ ಹೃದಯದಲ್ಲಿ ಎಲ್ಲಾ ಕಡೆಗಳಲ್ಲಿಯೂ ಗೀತಾ—ಸುಧೆಯನ್ನನುಸರಿಸುತ್ತ ನಾವೆಯೊಂದು ಹೋಗುತ್ತಿತ್ತು. ಶರದೃತುವಿನ ನಿರ್ಮಲ ಬೆಳದಿಂಗಳು ಚೆನ್ನಾಗಿ ಹರಡಿತ್ತು.

ಉಪಗುಪ್ತನು ತನ್ನ ಕಾರ್ಯದಲ್ಲಿ ಮಗ್ನನಾಗಿದ್ದನು. ಸಿಂಹವು ಜೀವ ಹೊಂದುವ ಆಶೆಯಿರಲಿಲ್ಲ. ಆದರೂ ಭಿಕ್ಷುವು ದತ್ತಚಿತ್ತನಾಗಿ ಕಾರ್ಯೋನ್ಮುಖನಾಗಿದ್ದನು.

ನಾವೆಯು ಅದೇ ಕಡೆಗೆ ಬರತೊಡಗಿತು. ಗಾನದ ಲಹರಿಯು ಉಪಗುಪ್ತನಿಗೆ ಚೆನ್ನಾಗಿ ಕೇಳಿಸತೊಡಗಿತು. ಅವನು ಅತ್ತ ನೋಡಿದನು. ನಾವೆಯಲ್ಲಿ ಮತ್ತಾರೂ ಇರಲಿಲ್ಲ. ಅದೇ ಮುಕ್ತ ಕುಂತಲಾ ರೂಪಸೀ ವಾಸವದತ್ತೆಯು ಶರದೃತುವಿನ ಭವ್ಯ ಬೆಳದಿಂಗಳಿನ ನಿಶೆಯಲ್ಲಿ ತೆರೆದ ಹೃದಯದಿಂದ ಹಾಡುತ್ತಿದ್ದಳು. ಭಿಕ್ಷುವು ಸಿಂಹದಲ್ಲಿ ನಾಟಿದ್ದ ಬಾಣವನ್ನು ಹೊರಗೆಳೆಯಲು ಉದ್ಯುಕ್ತನಾದ. ಹಾಡು ನಿಂತಿತು. ನಾವೆಯು ಭಿಕ್ಷುವಿನ ಅತಿ ಸಮೀಪವರ್ತಿಯಾಯ್ತು.

ನಾವೆಯಿಂದ ವಾಸವದತ್ತೆಯು ಚಕಿತಳಾಗಿ ಕೂಗಿದಳು.—ಕ್ಷ್ಮ, ಏನನ್ನು ಮಾಡುತ್ತಿರುವೆ? ಉಪಕಾರಮಾಡಿದವನಿಗೆ ಉಪಕಾರಮಾಡುವುದೆಂಬುದರಿಯದು. ಅದು ನಿನ್ನ ಸರ್ವನಾಶ ಮಾಡುವುದು.

ಉಪಗುಪ್ತ—ರಮಣೀ! ನೀನರಿಯೆ. ಬಾಹ್ಯ ಸೌಂದರ್ಯವುಳ್ಳ ದುಷ್ಟ ಪ್ರಾಣಿಗಳಷ್ಟು ದುಷ್ಟ ಪ್ರಾಣಿ ಇದಲ್ಲ. ತನ್ನ ಬಂಧನದಿಂದ

ಮಾನವನನ್ನು ಬಂದಿಯನ್ನಾಗಿ ಮಾಡುವ ಮೋಹಕ ರೂಪವುಳ್ಳ ಜಂತುಗಳಷ್ಟು ಹೀನ ಜಂತುವಿದಲ್ಲ. ಯಾವ ನಿಸ್ಸಾರ ಲೋಭ ಲಾಲಸೆಯಿಂದ ಮಾನವನು ತನ್ನ ಧ್ಯೇಯ ಧರ್ಮಗಳನ್ನು ಮರೆಯುವನೋ ಅದರಷ್ಟು ಭಯಂಕರವಲ್ಲ.

ವಾಸವದತ್ತೆಗೆ ಅವನ ಮಾತೊಂದೂ ಅರ್ಥವಾಗಲಿಲ್ಲ. ಪ್ರೇಮಾಧೀರಳಾದ ಅವಳು ಭಿಕ್ಷು ನಾನು ನಿನ್ನ ಪ್ರತೀಕ್ಷೆ ಮಾಡುತ್ತಲೇ ಇದ್ದೆನು. ನೀನು ಬರಲಿಲ್ಲ. ಮರೆತು ಹೋಗಿದ್ದೆ ಏನು?

ಉಪಗುಪ್ತ—ಇಲ್ಲ, ಮರೆತಿರಲಿಲ್ಲ ಬರುತ್ತೇನೆ. ಕೆಲವು ಕಾಲಾನಂತರ ನಿನ್ನಲ್ಲಿಗೆ ಬರುತ್ತೇನೆ.

ವಾಸವದತ್ತಾ—ಇಂದೇ ನನ್ನಲ್ಲಿಗೆ ಬಾ, ಭಿಕ್ಷು. ಇದಕ್ಕಿಂತ ಸುವರ್ಣ ಸಂಧಿಯು ಇನ್ನು ಯಾವಾಗ ದೊರೆಯುವುದು? ಇಂದು ಚಂದ್ರನು ಪ್ರಪಂಚವನ್ನು ಬೆಳಗುತ್ತಿದ್ದಾನೆ. ನೀನು ನನ್ನ ಮನೆಯ ಅಂಧಕಾರವನ್ನು ದೂರ ಮಾಡು.

"ನಿಲ್ಲು" ಎಂದು ಭಿಕ್ಷುವು ಮೆಲ್ಲನೆ ಸಿಂಹದ ಎದೆಯಿಂದ ಬಾಣವನ್ನು ಹೊರಕ್ಕೆ ತೆಗೆಯ ತೊಡಗಿದನು.

ವಾಸವದತ್ತಾ—ನೀನು ನಿನ್ನ ಸೌಂದರ್ಯಶರದಿಂದ ನನ್ನನ್ನು ಗಾಯಗೊಳಿಸಿದ್ದೀಯೆ. ಮೊದಲು ನನಗೆ ಪ್ರಾಣದಾನವನ್ನು ನೀಡು.

ಉಪಗುಪ್ತ - ಧೈರ್ಯ ತಾಳು, ಸುಂದರೀ, ನಾನು ಬರುತ್ತೇನೆ.

ವಾಸವದತ್ತಾ—ಯಾವಾಗ? ನಿನ್ನ ಪ್ರತೀಕ್ಷೆಯನ್ನು ಮಾಡುತ್ತಾ ಮಾಡುತ್ತಾ ನನ್ನ ನೇತ್ರ ಜ್ಯೋತಿಯು ನಂದಿದ ಮೇಲೆಯೇ? ದಿನಗಳನ್ನು ಎಣಿಸುತ್ತಾ ಎಣಿಸುತ್ತಾ ಕಾಲನು ನನ್ನ ಯೌವನವನ್ನು ಸೆಳೆದು ಕೊಂಡ ಮೇಲೆಯೇ?

ಉಪಗುಪ್ತ ಅವಳ ಕಡೆ ನೋಡಿದ. 'ಇಷ್ಟು ಜ್ಞಾನ ಬಂದಿದ್ದರೂ ಈ ಕೆಸರಿನಲ್ಲಿ ಇನ್ನು ಬಿದ್ದು ಕೊಂಡಿದೆ ಈ ಪ್ರಾಣಿ' ಎಂದ.

ವಾಸವದತ್ತಾ – ಯಾವಾಗ ಬರುತ್ತೀಯ?

ಉಪಗುಪ್ತ—ಈ ಜನ್ಮದಲ್ಲಿಯೇ!

ವಾಸವದತ್ತಾ—ಈ ಜನ್ಮದಲ್ಲೇ! ಬಹಳ ದೊಡ್ಡ ಅವಧಿ ಇದು.

ಉಪಗುಪ್ತ—ಹಾಗಾದರೆ-

ವಾಸವದತ್ತಾ—ಈ ಕ್ಷಣವೇ ಹೇಳು.

ಉಪಗುಪ್ತ—ಇಲ್ಲ.

ವಾಸವದತ್ತಾ—ಇದೇ ತಿಂಗಳಲ್ಲಿ!

ಉಪಗುಪ್ತ—ಇದೇ ವರ್ಷದಲ್ಲಿ ಬರುತ್ತೇನೆ. ಇದನ್ನು ನಂಬು.

ವಾಸವದತ್ತಾ—ನಾನು ನನ್ನ ಬೆರಳುಗಳಲ್ಲಿ ದಿನಗಳನ್ನೂ, ಉಸಿರಿನಲ್ಲಿ ಕ್ಷಣವನ್ನೂ ಎಣಿಸುತ್ತೇನೆ.

ವಾಸವದತ್ತೆಯು ಹೊರಟು ಹೋದಳು. ಉಪಗುಪ್ತನು ಸಾಯುವುದರಲ್ಲಿದ್ದ ಸಿಂಹದ ಹೃದಯದಿಂದ ಬಾಣವನ್ನು ತೆಗೆಯುವುದರಲ್ಲಿ ಮಗ್ನನಾದನು.

## III

ಶರತ್ಕಾಲ ಮುಗಿಯಿತು. ಶಿಶಿರ ಕಳೆಯಿತು. ಹೇಮಂತ ಉರುಳಿತು. ಆದರೆ ಉಪಗುಪ್ತ ಬರಲಿಲ್ಲ. ವಾಸವದತ್ತೆಯು ಅನೇಕ ಬಾರಿ ಅಶ್ರುಪೂರ್ಣ ಪ್ರತೀಕ್ಷೆ ಮಾಡಿದಳು. ಆದರೆ ಅವನು ಬರಲಿಲ್ಲ. ಅವಳು ಅನೇಕ ಸಾರಿ ಶೃಂಗರಿಸಿಕೊಂಡಳು. ಎಲ್ಲವೂ ವ್ಯರ್ಥವಾಯ್ತು!

ಸಕಲ ವೈಭವಗಳಿಂದ ಋತುಗಳ ರಾಜ ವಸಂತ ಬಂದನು. ಅವಧಿ ಮುಗಿಯುತ್ತಾ ಬಂದರೂ ಉಪಗುಪ್ತನ ಸುಳಿವಿಲ್ಲ. ವಾಸವದತ್ತೆಯು ಅತೃಪ್ತ-ಅಶಾಂತ ನೇತ್ರಗಳಿಂದ ಉಪಗುಪ್ತನ ದಾರಿಯನ್ನು ನೋಡುತ್ತಿದ್ದಳು.

ಅವಧಿ ಮುಗಿಯಲು ಇನ್ನೆರಡು ಮಾಸಗಳು ಮಾತ್ರ ಉಳಿದವು. ಒಂದೇ ಒಂದು ಮಾಸ ಉಳಿಯಿತು. ವರ್ಷಋತು ಕಾಣಿಸಿಕೊಂಡಿತು. "ಈ ಮಾಸದಲ್ಲಿ ನನ್ನ ಪ್ರಿಯತಮನು ಬರುವನೇ?"—ತೆರೆಯನ್ನು ಸರಿಸಿ ಒಳಗೆ ಹೋದಳು.

× × × × ×

ರಾತ್ರಿ ಸಮಯ. ಸಮಸ್ತ ಪೃಥ್ವಿ ಅಂಧಕಾರದಲ್ಲಿ ಮುಳುಗಿತ್ತು. ವಾಸವದತ್ತೆಯ ಗೃಹವು ಸಹಸ್ರಾರು ಜ್ಯೋತಿಗಳಿಂದ ಜಾಜ್ವಲ್ಯಮಾನ

ವಾಗಿತ್ತು. ವಿಲಾಸಗೃಹವು ಬಹುವಾಗಿ ಅಲಂಕರಿಸಲ್ಪಟ್ಟಿತ್ತು. ಸಹಸ್ರಾರು ಜ್ಯೋತಿತಾರೆಗಳ ನಡುವೆ ವಾಸವದತ್ತೆಯ ಮುಖಚಂದ್ರಮವು ಶೋಭಿಸುತ್ತಿತ್ತು.

ಅಂದು ಅವಳ ಮನೆಯಲ್ಲಿ ಉತ್ಸವ. ಅವಳ ಪ್ರಿಯನಾದ ಒಬ್ಬ ಲಕ್ಷಪತಿಯ ಸುಖಾಗಮನವನ್ನು ಬಯಸುವುದೇ ಆ ಉತ್ಸವದ ಉದ್ದೇಶ. ಒಂದೆಡೆ ಸಂಗೀತದ, ಇನ್ನೊಂದೆಡೆ ಸುರೆಯ ಧಾರೆಯು ಹರಿಯುತ್ತಿತ್ತು. ಇವುಗಳ ಮಧ್ಯೆ ಅಭಾಗ್ಯ ಲಕ್ಷಪತಿ ಮುಳುಗಿದ್ದನು;

ಅರ್ಧರಾತ್ರಿಯು ಕಳೆದಿತ್ತು. ಸುರಾಪಾನದಿಂದ ಲಕ್ಷಪತಿಯು ಅಚೇತನನಾಗಿ ಬಿದ್ದುಕೊಂಡಿದ್ದನು. ಅವನು ಅವನನ್ನೇ ಮರೆತಿದ್ದನು. ಸಂಗೀತ ಮುಕ್ತವಾಯಿತು. ದಾಸಿ, ಪರಿಚಾರಿಕೆ ಮೊದಲಾದವರೆಲ್ಲಾ ಹೊರಟು ಹೋಗಿದ್ದರು. ಆ ಕೊಠಡಿಯಲ್ಲಿ ಲಕ್ಷಪತಿ ಮತ್ತು ವಾಸವದತ್ತೆಯ ಹೊರತು ಇನ್ನಾರೂ ಇರಲಿಲ್ಲ. ಇಲ್ಲ, ಇಲ್ಲ. ಮತ್ತೊಂದು ಪಿಶಾಚಿಯು ಕುಳಿತ್ತಿತ್ತು. ಅದು ಯಾರು? ವೇಶ್ಯಾ ವಾಸವದತ್ತೆಯ ಅಂತಃಭಾರ್ಯೆ!

ವಾಸವದತ್ತೆಯು ಸುತ್ತಲೂ ನೋಡಿ ಮಂಚದ ಕೆಳಗಡೆಯಿಂದ ಒಂದು ಕಠಾರಿಯನ್ನು ತೆಗೆದಳು. ರಾತ್ರಿಯ ಅವೇಳೆಯಲ್ಲಿ ಒಬ್ಬ ವೇಶ್ಯೆಯ ಕೈಯಲ್ಲಿ ಕಠಾರಿ! ಆವಳು ಏನು ಮಾಡಬೇಕೆಂದಿರುವಳು? ಸಂಗೀತ ಸುಧೆಯನ್ನು ಸುರಿಸುವ ಮುಖಚಂದ್ರವು ವಜ್ರದ ಮಳೆಯನ್ನು ಕರೆಯುವುದೇ?

ಅವಳು ಆ ಲಕ್ಷಪತಿಯ ವಧೆಗೆ ಮುಂದುವರಿದಳು. ಅವಳ ಕಠಾರಿಯುತ ಕರವು ಆಕಾಶದ ಕಡೆಗೆ ಹೋಯ್ತು. ಅಷ್ಟರಲ್ಲಿ “ಸಾವಧಾನ! ಮೇಲೆ ಈಶ್ವರನಿದ್ದಾನೆ. ಅವನಿಗೆ ಹೆದರು.” ಪಾಪಿನಿಯು ಆ ಮೂಕಬೋಧೆಯನ್ನು ಅರಿಯಲಾರದೆ ಹೋದಳು. ಅವಳು ಕಠಾರಿಯನ್ನು ಎದೆಯಲ್ಲಿ ನಾಟಿಸಿದಳು. ಲಕ್ಷಪತಿ ಗತಪ್ರಾಣನಾದನು. ಅವನ ಅಂತಿಮಶಬ್ದ ಇದಾಗಿತ್ತು— “ಹಾಯ್! ಫಲನಾಮಯಿ ಪಿಶಾಚಿನೀ”.

ರೂಪವತೀ ರಾಕ್ಷಸಿ—ಸುಕುಮಾರ ಪಿಶಾಚಿನೀ—ತನ್ನ ವಿಜಯ

ಕ್ಕಾಗಿ ಪ್ರಸನ್ನಳಾದಳು. ಇಷ್ಟರಲ್ಲಿ ಹೊರಗಿನಿಂದ ಕರುಣಾಪೂರಿತ ಧ್ವನಿಯೊಂದು ಕೇಳಬಂತು—"ವಾಸವದತ್ತಾ"

ಕಂಪಿತೆ ವಾಸವದತ್ತಾ ಗವಾಕ್ಷದ್ವಾರವನ್ನು ತೆರೆದು-"ಯಾರು?" ಉತ್ತರದ ಆವಶ್ಯಕತೆ ಇರಲಿಲ್ಲ. ಗವಾಕ್ಷ ದ್ವಾರದ ಮೂಲಕ ದೃಷ್ಟಿ ವ್ಯಕ್ತಿಯನ್ನು ನೋಡಿತು. ಅವನು ಉಪಗುಪ್ತನಾಗಿದ್ದನು.

ವಾಸವದತ್ತಾ—ಹರ್ಷಯುಕ್ತಳಾಗಿ ಭಿಕ್ಷು ಬಂದುಬಿಟ್ಟೆಯಾ!

ಉಪಗುಪ್ತ– ಇಲ್ಲ. ಆದರೆ ಬೇಗ ಬರುತ್ತೇನೆ.

ವಾಸವದತ್ತಾ—ಹಾಗಾದರೆ ಈ ಸಮಯದಲ್ಲಿ ಬರಲು ಕಾರಣ?

ಉಪಗುಪ್ತ—ಏನೂ ಇಲ್ಲ. ನಾನು ನನ್ನ ಮಠಕ್ಕೆ ಹೋಗುತ್ತ ಲಿದ್ದೆ. ಇಲ್ಲಿ ನಿನ್ನ ನೆನಪು ಆಯ್ತು. ನೀನು ಮಲಗಿರುವೆಯೋ? ಅಥವಾ ಎದ್ದಿರುವೆಯೋ ಎಂದು ಕರೆದೆ ಅಷ್ಟೆ!

ವಾಸವದತ್ತಾ—ನಾನು ಎಚ್ಚತ್ತಿರುವೆನು.

ಉಪಗುಪ್ತ—ಆದರೆ ನಿನ್ನ ಎರಡು ಕಣ್ಣುಗಳು ಮುಚ್ಚಿವೆ. ಒಳ್ಳೆಯದು, ಹೋಗುತ್ತೇನೆ. ಇಂದು ಬಹಳ ವಿಲಂಬವಾಗಿದೆ.

ವಾಸವದತ್ತಾ—ನಿಲ್ಲು. ನಿನಗೆ ನಿನ್ನ ಪ್ರತಿಜ್ಞೆಯು ನೆನಪಿನಲ್ಲಿದೆಯೆ!

ಉಪಗುಪ್ತ– ಹೌದು! ಇದೆ.

ವಾಸವದತ್ತಾ ಈ ವರ್ಷಾಂತದಲ್ಲಿಯೇ ನೀನು ನನ್ನನ್ನು ಸಂಧಿಸುವೆನೆಂದು ವಚನ ಕೊಟ್ಟಿರುವೆ!

ಉಪಗುಪ್ತ—ವರ್ಷದಲ್ಲಿ ಇನ್ನು ಎಷ್ಟು ದಿನಗಳು ಉಳಿದಿವೆ?

ವಾಸವದತ್ತಾ—ಕೇವಲ ಒಂದೇ ಒಂದು ಪಕ್ಷ ಮಾತ್ರ!

ಉಪಗುಪ್ತ ನಾನು ಖಂಡಿತವಾಗಿ ಅದಕ್ಕೆ ಮುಂಚಿತವಾಗಿಯೇ ಬರುತ್ತೇನೆ.

ವಾಸವದತ್ತಾ—ನೀನು ಅನೃತವನ್ನಾಡುತ್ತಿರುವೆ. ನನ್ನೊಡನೆ ಛಲವನ್ನು ಬಿಡು ಭಿಕ್ಷು. "ಅಭಿಕಾಭರ ಶಿಷ್ಯನು ಎಂದಿಗೂ ಅನೃತವನ್ನಾಡನು. ಛಲ ಕಪಟ ಅವನ ಧರ್ಮವಲ್ಲ."

ಉಪಗುಪ್ತನು ರಜನಿಯ ಗಂಭೀರ ಅಂಧಕಾರದಲ್ಲಿ ಮಿಲನ

ಹೊಂದಿ ಅದೃಶ್ಯನಾದನು. ವಾಸವದತ್ತೆಯು ಗವಾಕ್ಷದ ಮುಸುಕು ದೆರೆಯನ್ನು ಮುಚ್ಚಿಕೊಂಡಳು.

IV

ವಾಸವದತ್ತೆಯು ಹಣಕ್ಕಾಗಿ ಹಣವಂತನನ್ನು ಕೊಲೆ ಮಾಡಿದ್ದಳು. ಕೊಲೆಗಾತಿ ಸಿಕ್ಕಿದಳು. ನ್ಯಾಯಾಲಯದಲ್ಲಿ ವಿಚಾರಣೆಯಾಯ್ತು.

ಅವಳ ಅತುಳೈಶ್ವರ್ಯವು ಅವಳನ್ನು ಕಾಪಾಡಲಿಲ್ಲ. ಅವಳ ಪ್ರೇಮಿಯು ಅವಳನ್ನು ಕಾಪಾಡಲಿಲ್ಲ. ಅವಳ ರೂಪು ಅವಳನ್ನು ದಂಡದಿಂದ ಪಾರುಮಾಡಲಿಲ್ಲ.

ಹತಭಾಗಿನಿಗೆ ನ್ಯಾಯಾಲಯದಲ್ಲಿ ಮರಣದಂಡನೆ ವಿಧಿಸಲ್ಪಡಲಿಲ್ಲ. ಪ್ರಾಣದಂಡನೆಯು ಅವಳ ಅಶಾಂತ ಜೀವನಕ್ಕೆ ಶಾಂತಿಯನ್ನು ಕೊಡುತ್ತಿತ್ತು. ಅದು ದಂಡವಲ್ಲ. ಆಶೀರ್ವಾದ.

ಆದರೆ ಅವಳು ಆಶಿಸಿದ್ದಂತೆ ಆಗಲಿಲ್ಲ.

ಅವಳ ರೂಪ ಕುರೂಪ ಮಾಡಲ್ಪಟ್ಟಿತು. ಅವಳ ಚಂದ್ರ ವದನದಲ್ಲಿ ಕಂಗೊಳಿಸುತ್ತಿದ್ದ ನೇತ್ರದ್ವಯಗಳು ಕೀಳಲ್ಪಟ್ಟವು. ನಾಸಿಕವು ಕೊಯ್ಯಲ್ಪಟ್ಟಿತು. ಅವಳ ಮೃಣಾಲ ಕರಗಳು ಕತ್ತರಿಸಲ್ಪಟ್ಟವು. ಅವಳ ಧನ ಸಂಪತ್ತುಗಳು ಕಿತ್ತುಕೊಳ್ಳಲ್ಪಟ್ಟವು.

ಭೀಷಣ ದಂಡದಿಂದ ತಪ್ತಳಾದ ಅವಳು—ನನಗೆ ಒಂದು ವಾರ ಅವಧಿಯನ್ನು ಕೊಡಿ. ನನಗೆ ಒಬ್ಬ ಪ್ರೇಮಿಯನ್ನು ಸಂಧಿಸುವುದಿದೆ. ಒಂದು ವಾರದಲ್ಲಿ ಅವನು ಬರುವವನಿದ್ದಾನೆ. ನಂತರ ನಾನು ಶಿಕ್ಷೆಗೆ ಸಿದ್ಧಳಾಗಿದ್ದೇನೆ. ಎಂದಳು.

ಅವಳ ವಿನಯಾಲಾಪವನ್ನು ಯಾರೂ ಕೇಳಲಿಲ್ಲ. ಘಾತುಕರು ಅವಳನ್ನು ಕುರೂಪಿಯನ್ನಾಗಿ ಮಾಡಿ ರಾಜಪಥದಲ್ಲಿ ಕೆಡವಿದರು.

ಎಷ್ಟು ಭಯಾನಕ ಮತ್ತು ಭೀಭತ್ಸ ದೃಶ್ಯ! ಅವಳ ಗಾಯಗಳಿಂದ ರಕ್ತಾದಿಗಳು ಸುರಿಯುತ್ತಿದ್ದವು. ನೊಣಗಳುಬಂದು ಕುಳಿತು ಹಾವಳಿ ಮಾಡುತ್ತಿದ್ದವು. ಪಾಪ! ಅವುಗಳನ್ನು ಓಡಿಸಲು ಕೈಗಳಿಲ್ಲ. ಕರುಣಾಪೂರಿತ ಧ್ವನಿಯಿಂದ ರೋದಿಸುತ್ತಿದ್ದಳು.

ಹಿಂದೆ ಅವಳ ಸೌಂದರ್ಯೋಪಾಸಕರಾಗಿದ್ದವರು ಅವಳನ್ನು ತೃಣವಾಗಿ ಭಾವಿಸತೊಡಗಿದರು. ದಾರಿಯಲ್ಲಿ ಹಾದು ಹೋಗುವ ಒಬ್ಬ ಬಿಕ್ಷುಕ, ತುಂಟ. ಕುರುಡ, ರೋಗಿ ಯಾರೇ ಆಗಲಿ ಅವಳನ್ನು ಸ್ಪರ್ಶಿ ಸುತ್ತಿರಲಿಲ್ಲ. ಯಾವಾಗ ವಿಶ್ವಾಕರ್ಷಕ ರೂಪು ಅವಳಲ್ಲಿ ಇಲ್ಲದೇ ಹೋಯಿತೋ, ಯೌವ್ವನವು ನಶಿಸಿತೋ, ಧನ ಧಾನ್ಯಗಳು ಉಳಿಯು ಲಿಲ್ಲವೋ, ಸಮಸ್ತ ಪ್ರಪಂಚವೇ ಅವಳನ್ನು ತಿರಸ್ಕಾರ ದೃಷ್ಟಿಯಿಂದ ನೋಡತೊಡಗಿತ್ತೋ, ಅಂತಹ ದುರ್ದಿನದಲ್ಲಿ ಉಪಗುಪ್ತನು ಅವಳ ಮಸ್ತಕದ ಮೇಲೆ ತನ್ನ ನಿಷ್ಕಲ್ಮಷಕರವನ್ನು ಇಟ್ಟನು.

ವಾಸವದತ್ತೆಯು—ಚಕಿತಳಾಗಿ–'ಯಾರು?'

ಉಪಗುಪ್ತ ಉತ್ತರ ಕೊಟ್ಟನು—'ನಾನು'

ವಾಸವದತ್ತೆಯು ಕಂಠ ಸ್ವರದಿಂದ ಅವನನ್ನು ಗುರ್ತಿಸಿದಳು. ಆದರೂ ತನ್ನ ಭ್ರಮ ನಿವಾರಣಾರ್ಥ—ಯಾರು? ಉಪಗುಪ್ತನಲ್ಲವೇ! ಎಂದಳು.

ಉಪಗುಪ್ತ—ಹೌದು-ನಾನು ಉಪಗುಪ್ತನೇ!

ವಾಸವದತ್ತೆಯು ದೀರ್ಘ ಶ್ವಾಸವನ್ನೆಳೆದು—ಹಿಂದಿರುಗಿ ಹೋಗು ಏತಕ್ಕಾಗಿ ಬಂದೆ? ನನ್ನನ್ನು ಉಪಹಾಸ ಮಾಡುವುದಕ್ಕಾಗಿ ಬಂದೆಯಾ?

ಉಪಗುಪ್ತ—ಹಿಂದಿರುಗುವಂತೆ ಹೇಳಿದೆ. ಏಕೆ? ನೀನು ಹೇಳಿದ್ದಂತೆ ನಾನು ಬಂದಿರುವೆನು. ನನ್ನ ಬರುವಿಕೆಯಲ್ಲಿ ವಿಲಂಬವು ಕೊಂಚವೂ ಆಗಿಲ್ಲ. ವರ್ಷ ಮುಗಿಯಲು ಇನ್ನೂ ಎರಡು ದಿನಗಳಿವೆ.

ವಾಸವದತ್ತಾ—ನಿರಾಶಾ ಸ್ವರದಿಂದ—ಹಾಯ್! ಯಾವಾಗ ನನ್ನ ದೇಹವು ವಸಂತ ಸೌರಭವನ್ನು ನಾಚಿಸುವಂತಿತ್ತೋ, ಆಗ ನೀನು ಬರಲಿಲ್ಲ. ಯಾವಾಗ ನನ್ನ ಶೋಭಾ ಚಂದ್ರನು ಪೃಥ್ವಿಯ ಮೇಲೆ ಸುಧಾ ದೃಷ್ಟಿಯನ್ನು ಕರೆಯುತ್ತಿದ್ದನೋ ಆಗ ನೀನು ಬರಲಿಲ್ಲ. ಯಾವಾಗ ಘಾತುಕರು ನನ್ನ ಯೌವ್ವನವನ್ನು ಅಂತ್ಯಗೊಳಿಸುವ ಸಲುವಾಗಿ ಕೃಷ್ಣ ಶಿಲೆಯ ಮೇಲೆ ತಮ್ಮ ಶಸ್ತ್ರಗಳನ್ನು ಮಸೆಯುತ್ತಿದ್ದರೋ ಆಗಲೂ ನೀನು ಬರಲಿಲ್ಲ. ಭಿಕ್ಷು ನೀನು ಇಷ್ಟು ಅರಿಯದವನೆ! ನನ್ನ ಸೌಂದರ್ಯ

ಜ್ಯೋತಿಯು ನಂದಿ ಹೋಗಿದೆ. ನನ್ನ ಶೋಭಾರವಿಯು ಅಸ್ತಂಗತ ನಾಗಿದ್ದಾನೆ! ಇಂತಹ ಸಮಯದಲ್ಲಿ ನೀನೇಕೆ ಬಂದೆ?

ಉಪಗುಪ್ತ—'ಭಗಿನೀ' ನಾನು ಇಂದ್ರಿಯ ಸುಖ ಅಥವಾ ಇತರ ವಿಧವಾದ ಸ್ವಾರ್ಥ ಪ್ರೇರಿತನಾಗಿ ನಿನ್ನ ಬಳಿಗೆ ಬರಲಿಲ್ಲ. ಶಾರೀರಕ ಸೌಂದರ್ಯ ವ್ಯರ್ಥ. ನಿನ್ನ ಈ ಶರೀರವೇ ಇದಕ್ಕೆ ಸಾಕ್ಷಿಯಾಗಿದೆ. ಧನವೂ ನಿಸ್ಸಾರ. ನಿನ್ನ ಅತುಳೈಶ್ವರ್ಯವು ಇದಕ್ಕೆ ಉದಾಹರಣೆಯಾಗಿವೆ. ನಾನು ನಿನ್ನಲ್ಲಿಗೆ ಬಂದಿದ್ದೇನೆ. ಹೇಳು. ಏನು ಹೇಳುವುದಿಯೋ ಅದನ್ನು ಹೇಳು.

ವಾಸವದತ್ತೆಯ ಕಣ್ಣುಗಳು ತೆರೆದವು. ಅವಳು—ನಾನೇನು ಹೇಳಲಿ? ಭಿಕ್ಷು. ನಿನ್ನ ಈ ಪ್ರಶ್ನೆಯೇ ನನ್ನ ಉತ್ತರವನ್ನು ಸೆಳೆದು ಕೊಂಡಿದೆ. ನಾನು ಹೇಗೆ ಯಾವುದೋ ಸ್ವಪ್ನ ಜೀವನದಲ್ಲಿ, ಯಾವುದೋ ಛಾಯೆಯನ್ನು ಅನುಸರಿಸಿಕೊಂಡು ಪಾಪಕೂಪದ ದಾರಿಯಲ್ಲೇ ನಡೆಯುತ್ತಿದ್ದೆನೆಂಬುದು ಜ್ಞಾಪಕಕ್ಕೆ ಬರುತ್ತಿದೆ. ನಾನು ಹೇಳುವುದು ಏನೂ ಇಲ್ಲ. ನೀನು ನನ್ನ ಬಳಿ ಕೊಂಚ ಕಾಲ ನಿಂತುಕೊಂಡಿರು. ನಿನ್ನ ಸ್ಪರ್ಶ ಮಾತ್ರದಿಂದ ನನ್ನ ಯಾತನೆ ಎಷ್ಟೋ ಕಡಿಮೆಯಾಗುತ್ತಿದೆ. ನಿನ್ನ ವಚನಗಳಿಂದ ನನ್ನ ಸಂತಾಪವು ದೂರವಾಗುತ್ತಿದೆ. ಭಿಕ್ಷು ಶ್ರೇಷ್ಟ! ನೀನೇ ಏನಾದರೂ ಹೇಳು!

ಉಪಗುಪ್ತ—ಪ್ರಪಂಚದಲ್ಲಿ ದುಃಖದ ಮೂಲ ತೃಷ್ಣೆ. ನೀನು ಇದೇ ತೃಷ್ಣೆಯ ದಾಸಿಯಾಗಿ ನಿನ್ನ ಜೀವಿತವನ್ನು ಕಳೆದೆ. ನಿನ್ನ ಕಾರ್ಯ ತತ್ಪರತೆಯು ಭರದಿಂದ ನಿನ್ನ ಸ್ವಧರ್ಮವನ್ನು ಮರೆತೆ. ನೀನು ನಿನ್ನ ಪ್ರೇಮಿಯಾಗಿದ್ದ ಲಕ್ಷ್ಮಪತಿಯ ಕೊಲೆ ಮಾಡಿದೆ. ಇಂದು ಈ ದುಃಖ ಕಾಲದಲ್ಲಿ ನಿನ್ನ ಕಾರ್ಯ ತತ್ಪರತೆಯು ಯಾವ ಪ್ರಯೋಜನಕ್ಕೂ ಬರುವುದಿಲ್ಲ.

ವಾಸವದತ್ತಾ- ಭಿಕ್ಷು! ನೀನು ಇಷ್ಟು ಅನರ್ಥವಾಗುವುದಕ್ಕಿಂತ ಮುಂಚೆಯೇ ಬಂದು ನನ್ನನ್ನು ಕುಲಪಥದಿಂದ ಬೇರೆ ಮಾರ್ಗದಲ್ಲಿ ತೆಗೆದುಕೊಂಡು ಹೋಗಬಾರದಿತ್ತೇಕೆ! ನೀನು ಬಂದೆ. ಆದರೆ—ಕಾಲವು ಮಿಂಚಿ ಹೋದ ಮೇಲೆ!

ಉಪಗುಪ್ತ- ಸ್ವಲ್ಪವೂ ವಿಳಂಬವಾಗಿಲ್ಲ. ಇನ್ನೂ ಬಹಳ ಕಾಲ ವಿದೆ. ನೀನು ಈಗ ಬಾಹ್ಯ ನೇತ್ರಗಳಿಲ್ಲದೇ ಇದ್ದೀಯೆ. ಆದರೆ ಅಂತಶ್ಚಕ್ಷುಗಳು ತೆರೆದಿವೆ. ಏಳು. ಭಗವಾನ್ ಬೋಧಿಸತ್ವನ ಚರಣ ವನ್ನು ನಂಬು. ಅವನು ನಿನ್ನ ದುಃಖವನ್ನು ದೂರಮಾಡುತ್ತಾನೆ. ನಿನ್ನನ್ನು ಮುಕ್ತಳನ್ನಾಗಿ ಮಾಡಲು ಅವನೇ ಶಕ್ತ.

ವಾಸವದತ್ತೆಯ ನವೀನ ಸಂಸಾರದಲ್ಲಿ ಆಕಾಶ ಮಾರ್ಗದಿಂದ ಸುಧಾ ಬಿಂದುಗಳು ಸುರಿದವು. ಅವಳ ಸಾತ್ವಿಕ ಪ್ರವೃತ್ತಿ ಜಾಗೃತ ವಾಯಿತು. ಅವಳಿಗೆ ಪ್ರಪಂಚದ ಕ್ಷಣ ಭಂಗುರತ್ವದ ಅರಿವಾಯ್ತು. ಅರಿವೊಂದೇ ಅಲ್ಲ ಅನುಭವವೂ ಆಯ್ತು. ಅವಳು ಭಿಕ್ಷುವಿನ ಪಾದ ಗಳಲ್ಲಿ ತನ್ನ ಮಸ್ತಕವನ್ನಿಟ್ಟು "ಭಿಕ್ಷು, ನಾನು ಪಾಪಿನಿ. ನನ್ನನ್ನು ಶಾಂತಿ ಸಾಮ್ರಾಜ್ಯಕ್ಕೆ ಕರೆದುಕೊಂಡು ಹೋಗು."

ಭಿಕ್ಷುವು ತನ್ನ ಪವಿತ್ರ ಹಸ್ತಗಳಿಂದ ಅವಳನ್ನು ಸ್ಪರ್ಶಿಸಿದನು. ಇಬ್ಬರೂ ಸಂಘದ ಕಡೆಗೆ ತೆರಳಿದರು.

ಪಾಪ ತಾಪ ವಿದಗ್ಧೆಯಾದ ವಾಸವದತ್ತೆಯು ಪ್ರಾಯಶ್ಚಿತ್ತ ಸುರಸರಿಯಲ್ಲಿ ಮಿಂದು ಪಾವನವಾದಳು. ಭಿಕ್ಷುಕಿಯಾಗಿ ತನ್ನ ಶೇಷಾಯುಸ್ಸನ್ನು ಶಾಂತಿಯಿಂದ ಕಳೆದಳು.



೨

# ಮೃತ್ಯು ಮುಖದಲ್ಲಿ

ಶಿಕಾರಿ ಹೊರಡಬೇಕಾದರೆ ನನ್ನ ಜೊತೆಯಲ್ಲಿ ನೀಲಕಂಠ ಇದ್ದೇ ಇರಬೇಕು. ಏಕೆಂದರೆ ಅವನು ಒಳ್ಳೆಯ ಗಟ್ಟಿ ಪಿದ್ಯೆಯ ಮನುಷ್ಯ, ಅದರಲ್ಲೂ ನನ್ನ ಆಪ್ತ ಮಿತ್ರ. ಶಿಕಾರಿ ಸಂಬಂಧವಾದ ಎಲ್ಲಾ ವಿಷಯ ಗಳೂ ಅವನಿಗೆ ಗೊತ್ತಿತ್ತು—ಸಂಕಟ ಸಮಯದಲ್ಲಿ—ಹುಲಿ ಮೇಲೆ ಬೀಳುವ ಸಮಯದಲ್ಲಿ ಸಾಹಸದಿಂದ ತನ್ನ ಜೊತೆಯವನನ್ನು ಉಳಿಸು ವುದು, ಶಿಕಾರಿ ಸಂಬಂಧದ ಮೂಲ ತತ್ವವನ್ನನುಸರಿಸಿ ಕೆಲಸ ಮಾಡುವುದು, ನಿರ್ಜೀದ್ಯವಾದ ಸ್ಥಳಗಳಲ್ಲಿ ವಿವಿಧ ಪ್ರಾಣಿಗಳ ಧ್ವನಿ ಯಲ್ಲಿ ಶಿಳ್ಳೆಹಾಕುವುದು, ಕೂಗುವುದು—ಇವೆಲ್ಲಾ ವಿಶಿಷ್ಟ ಗುಣಗಳೂ ಅವನಲ್ಲಿತ್ತು.

ನಮ್ಮಿಬ್ಬರಲ್ಲಿ ಒಂದೇ ಒಂದು ಭೇದವಿತ್ತು. ಅವನಿಗೆ ಶಿಕಾರಿ ಮಾಡುವುದು ಎಂದರೆ ಅತ್ಯಂತ ಪ್ರೀತಿ. ಶಿಕಾರಿ ಎಂದರೆ ಒಂದು ಕಲೆ ಎಂದು ನಾನು ಭಾವಿಸುತ್ತೇನೆ. ಏಕೆಂದರೆ ನಾನು ಶಾಖಾಹಾರಿ. ಅನ್ಯ ವಿಷಯಗಳಂತೆ ಇದೂ ಒಂದು ವಾಸನೆ. ಆದರೆ ಮಿಕ್ಕೆಲ್ಲಾ ವ್ಯಸನಗಳಿ ಗಿಂತ ಶಿಕಾರಿ ಮಾಡುವುದು ಒಂದು ಉತ್ತಮ ವ್ಯಸನ. ಬಹಳವಾಗಿ ನಾನು ವಿದ್ಯಾರ್ಥಿಗಳಿಗೆ ಈ ವ್ಯಸನ ಇದ್ದೇ ತೀರಬೇಕು ಎನ್ನುತ್ತೇನೆ. ಯಾರ ದೇಹದಲ್ಲಿ ಬಿಸಿರಕ್ತ ಹರಿಯುತ್ತದೆಯೋ, ಜೀವನ ಯಾತ್ರೆಯಲ್ಲಿ ಇನ್ನೂ ಮಧ್ಯಾಹ್ನವಾಗಲಿಲ್ಲವೊ, ಅಂತಹ ವಿದ್ಯಾರ್ಥಿಗಳು ಸಾಹಸದ ಮರಿಗಳಾಗಲು ಶಿಕಾರಿಯೊಂದು ಉನ್ನತ ಮಾರ್ಗ. ನವಯುವಕರಿಗೆ ಶಸ್ತ್ರ ಮತ್ತು ಅವುಗಳ ಪ್ರಯೋಗಗಳ ವಿಷಯದಲ್ಲಿ ಸಾಕಷ್ಟು ಜ್ಞಾನ ವಿರಲೇಬೇಕೆಂಬುದು ನನ್ನ ಅಭಿಮತ.

ಹಿಂದಿನ ದಿನಪ ಬೇಟೆಯಲ್ಲಿ ಹುಲಿಯಿಂದ ತಪ್ಪಿಸಿಕೊಂಡು ಬಂತು. ಅದೇ ವಿಶ್ರಮಿಸಿಕೊಳ್ಳುತ್ತಿದ್ದೆ. ನೀಲಕಂಠ ಬಂದನು. ಪುನಃ ಶಿಕಾರಿ ಹೋಗಲು ಅಪೇಕ್ಷಿಸಿದನು. ನಾನು–ಬಿಡಪ್ಪಾ ನೀಲಕಂಠ,

ನಾವೇನು ಮಿಲಿಟರಿಗಳಂತೆ ಎಲ್ಲಾ ಕಡೆಯಲ್ಲೂ ತಿರುಗಬೇಕಾಗಿಲ್ಲ. ನಿನ್ನೆ ಒಂದು ಶಿಕಾರಿಯಾಯ್ತು. ನಾನೇ ಶಿಕಾರಿ ಆಗ್ತಾ ಇದ್ದೆ. ಇನ್ನೂ ಎರಡು ದಿನಗಳಾಗಲಿ.

ನೀಲ—ಏನು ಮಾಡುತ್ತೀಯಾ, ಮನೆಯಲ್ಲಿ ಬಿದ್ದುಕೊಂಡು? ದುಷ್ಟ ಪ್ರಾಣಿಗಳು ಎಂದಿದ್ದರೂ ಸಾಯಲೇ ಬೇಕು. ಅವುಗಳನ್ನು ಹಾಗೆಯೇ ಬಿಟ್ಟರೆ ಸಾಧು ಪ್ರಾಣಿಗಳಿಗೆ ಎಷ್ಟು ತೊಂದರೆ! ಅಂತಹ ಆತತಾಯಿಗಳನ್ನು ಕೊಂದರೆ ಇವುಗಳಿಗೆ ಸುಖವಾಗುವುದಿಲ್ಲವೇ! ಹೋಗಲಿ ಅಂತ ಬಿಟ್ಟರೆ ಅವು ತಮ್ಮ ದುಷ್ಟತನವನ್ನು ಬಿಡುತ್ತ ವೇನಯ್ಯಾ! "ಪಯಃಪಾನಂ ಭುಜಂಗಾನಾಂ ಕೇವಲ ವಿಷವರ್ಧನಂ" ಅಂತ ಅವು ಇನ್ನು ಹೆಚ್ಚಿಕೊಂಡುಬಿಡುತ್ತವೆ.

ನಾನು—ಓಹೋ ಸಾಕಯ್ಯ ನಿನ್ನ ಉಪನ್ಯಾಸ. ಇಂದೇ ಶಿಕಾರಿ ಹೋಗಲೇ ಬೇಕು, ಅಂತ ಅಷ್ಟೇ ಹೇಳು. ನಾನು.....

ನೀಲ—ಮತ್ತೆ ಏನಯ್ಯಾ, ಇವತ್ತು ಭಾನುವಾರ. ಇವತ್ತು ಬಿಟ್ಟರೆ ಇನ್ನಾವ ದಿನ ನಮಗೆ ಪುರಸತ್ತು?

ನಾನು - ಆಗಲಪ್ಪಾ. ಆದರೆ ಇವತ್ತೇನಾದರೂ ಹುಲಿ ಸಿಕ್ಕಿದರೆ First Firing ನಿನ್ನದು. ಬಹಳ ದಿನಗಳಿಂದ ನೀನು Fire ಮಾಡಿಲ್ಲ, ನಾನೇ ಹೊಡೆಯುತ್ತಿದ್ದೇನೆ.

ನೀಲ—ಆಗಲಿ. ಹುಲೀನ ಈ ಲೋಕ್ದಿಂದ ಇನ್ನೊಂದ್ಲೋಕಕ್ಕೆ ಕಳುಹಿಸುವ ಕಷ್ಟ ನಾನು ತೆಗೆದುಕೊಳ್ಳುತ್ತೇನಯ್ಯಾ. ನೀನು ಮಾತ್ರ ಮುಂದಾಳಾಗಿರು. ಹಾಗಾದರೆ ನಾನು ಎರಡುಗಂಟೆ ಹೊತ್ತಿಗೆ ಬರುತ್ತೇನೆ.

ಊಟ ಮುಗಿಸಿ ಕಾಡಿನ ಕಡೆ ಹೊರಟೆವು. ನನ್ನ $1\frac{1}{2}$ ವರ್ಷದ ಮಗುವೊಂದು ನಾನು ಹೊರಟಾಗ 'ನಾನೂ ಹುಲಿ ಛಂ ಅನ್ಸೋಕೆ ಬರ್ತೀನಣ್ಣ' ಎಂದಿತು. ನಾವು ನಗುತ್ತಾ ಹೊರಬಿದ್ದೆವು.

× × ×

ಒಂದು ಮೈಲಿ ದಾರಿಯನ್ನು ನದೀ ತೀರದಲ್ಲೇ ನಡೆದೆವು. ನಮ್ಮೂರ ನದಿ ಅಲ್ಲಿ ಒಳ್ಳೇ ರಭಸದಿಂದ ಹರಿಯುತ್ತಿತ್ತು. ನಯ

ನಾಭಿರಾಮವಾದ ಪ್ರಕೃತಿ. ಬನದ ಒಂದೊಂದು ವಸ್ತುವೂ ನವೀನ. ಒಂದು ಕಲಿಯುಬೇಕಾದ ಹಲವು ಗುಣರಾಶಿಗಳು.

ಮಾನವ ಪ್ರಕೃತಿ ಪ್ರತಿದಿನ ಒಂದೇ ವಸ್ತುವನ್ನು ನೋಡುತ್ತಾ ನೋಡುತ್ತಾ ಬೇಸರಹೊಂದುತ್ತದೆ. ಆಗ್ರಾ ನಿವಾಸಿಗಳಿಗೆ ತಾಜ ಮಹಲನ್ನು ನೋಡುವುದರಲ್ಲಿ ಕುತೂಹಲತೆಯಿಲ್ಲ. ವೃಂದಾವನ ವಾಸಿಗಳಿಗೆ ಅಲ್ಲಿಯ ಭವ್ಯ ಸೌಂದರ್ಯದ ಕಡೆ ದೃಷ್ಟಿ ಇಲ್ಲ. ನಮಗೂ ನಮ್ಮ ದಾರಿಯಲ್ಲಿನ ಸೌಂದರ್ಯದಿಂದ ಸಂತೋಷವೇನೂ ಉಂಟಾಗುತ್ತಿರಲಿಲ್ಲ. ಅದು ಪ್ರತಿದಿನದ ನೋಟ. ಅದರಿಂದ ಬೇಸತ್ತಿದ್ದೆವು. ಆದ್ದರಿಂದ ದಾರಿ ಕಳೆಯುಲು ನಾನು ಯಾವುದೋ ಒಂದು ಗ್ರಾಮ್ಯಪದವನ್ನು ಹಾಡತೊಡಗಿದೆ. ಪರ್ವತಗಳ ಗಗನ ಚುಂಬಿತ ಶಿಖರದ ವರೆಗೂ ನನ್ನ ಧ್ವನಿಯು ಮುಟ್ಟುವಂತಿತ್ತು.

ಹೀಗೆಯೇ ನಾವು ಆ ಗ್ರಾಮದ ಹತ್ತಿರ ಬಂದೆವು. ನಮ್ಮ ಪರಿಚಿತ ಮುದುಕನೊಬ್ಬನು ನಮ್ಮನ್ನು ಸ್ವಾಗತಿಸಿದನು. ಮುದುಕ ಮತ್ತು ಅವನ ವೃದ್ಧೆಯಾದ ಹೆಂಡತಿ—ಇಬ್ಬರೂ ದರಿದ್ರತಾ ಮತ್ತು ದೀನತೆ ದುಃಖಗಳ ಸಾಕ್ಷಾತ್ ಮೂರ್ತಿಗಳಾಗಿದ್ದರು.

ಭಗ್ನಾವಶೇಷ ಗುಡಿಸಲೇ ಅವರ ನಿವಾಸ. ಗುಡಿಸಲ ಮುಂದೆ ಒಂದು ಚಪ್ಪರ. ಚಪ್ಪರದಲ್ಲಿ ಒಂದು ಹಸು ಕಟ್ಟಲ್ಪಟ್ಟಿತ್ತು. ಎರಡು ಎತ್ತುಗಳು, ಹುಲಿಯಿಂದ ಹೊಡೆಯಲ್ಪಟ್ಟಿದ್ದ ಎರಡು ಹಸುಗಳು, ಒಂದು ಕರು, ನೇಗಿಲು, ಸ್ವಲ್ಪ ಬೀಜ— ಇವೇ ಅದರ ಆಸ್ತಿಯಾಗಿತ್ತು. ಪಾತ್ರೆಗಳಲ್ಲಿ ತವೆ, ಸೌಟು, ಲೋಟಗಳೆರಡು, ಎರಡು ತಟ್ಟೆ. ಬಟ್ಟೆಗಳಲ್ಲಿ ಮುದುಕನು ಬಲಿಷ್ಟ ಒಂದು ಶೀರ್ಣ ವಸ್ತ್ರ–ಮುದುಕಿಯು ಉಟ್ಟಿದ್ದು ನಾರುಬಟ್ಟೆ-ಹಿತ್ತಾಳೆಯ ಸೌಭಾಗ್ಯ ಚಿಹ್ನ ಸೂಚಕ ಆಭರಣಗಳು, ಅಷ್ಟೆ. ಪ್ರೇಮ, ಸಹೃದಯತೆ, ತನ್ನಲ್ಲಿದ್ದುದನ್ನು ನೀಡುವುದು ಇವೇ ಅವರ ಆತಿಥ್ಯದ ಅರ್ಥವಾಗಿತ್ತು. ಆದರೆ ಪ್ರೇಮಪೂರ್ವಕವಾಗಿ ನೀಡಿದ ಈ ಇವೇ ಅತಿಥಿಗಳಿಗೆ ಷಡ್ರಸ ಸಮಾನವಾಗುತ್ತಿತ್ತು. ಆ ಹುಲಿಯನ್ನು ಹೊಡೆದ ಮೇಲೆ ನಮ್ಮಲ್ಲಿ ಅವನಿಗೆ ಪೂರ್ಣ ವಿಶ್ವಾಸ, ಪ್ರೀತಿಗಳಿದ್ದವು.

× × ×

ಹಾಲು ಕುಡಿದುಕೊಂಡು ಕಾಡಿನ ಕಡೆಗೆ ಹೊರಟೆವು. ಜೊತೆಯಲ್ಲಿ ಆ ಮುದುಕ ಮತ್ತಿತರ ಏಳು ಮಂದಿಯೂ ಇದ್ದರು. ವ್ಯಾಘ್ರಾಹುತಿಗಾಗಿ ಒಂದು ಕುರಿಯನ್ನು ಜೊತೆಯಲ್ಲಿ ತೆಗೆದುಕೊಂಡದ್ದಾಯ್ತು. ಎಲ್ಲರ ಕೈಯಲ್ಲಿಯೂ ಲಾಠಿಗಳು, ಹಗ್ಗಗಳು ಇದ್ದವು. ಇಲ್ಲಿ ನಾವೆಲ್ಲರೂ ಕುಳಿತರೆ– ಇಲ್ಲಿ ಕುರಿಯನ್ನು ಕಟ್ಟಬೇಕು, ಕಟ್ಟುವ ಸ್ಥಳ ಹೀಗಿರಬೇಕು. ಕುರಿಯು ಕೂಗು ದೂರಕ್ಕೆ ಕೇಳುವಂತೆ ಇರಬೇಕು. ಕುರಿಗೆ ಎಂಟು–ಹತ್ತು ಗಜಗಳ ಅಂತರದಲ್ಲಿ ಕುಳಿತುಕೊಳ್ಳಬೇಕು. ಕುರಿಯ ಮೇಲೆ ಬೀಳುವುದರಲ್ಲಿಯೇ Fire ಮಾಡುವುದು. ಹುಲಿಗೆ ನಾವು ಕಾಣದಂತೆ ಕುಳಿತುಕೊಳ್ಳಬೇಕು. ಹುಲಿ ಬಂದು ಕುರಿಯನ್ನು ಹೊತ್ತುಕೊಂಡು ಹೋದ ಮೇಲೆ ನಾವು ಎತ್ತ ಕಡೆಯೋ ಗಾಬರಿಯಲ್ಲಿ Fire ಮಾಡಬಾರದು. ಗಾಬರಿಯಲ್ಲಿ ಸಿಕ್ಕಿ ಹುಲಿ ಎಂದು ಕುರಿಗೆ Fire ಮಾಡಬಾರದು. ಕುರಿಯನ್ನು ಸರಿಯಾಗಿ ಗಟ್ಟಿಯಾಗಿ ಕಟ್ಟಬೇಕು— ಎಂಬ ಎಲ್ಲಾ ವಿಚಾರಗಳನ್ನೂ ನಮ್ಮ ನಮ್ಮಲ್ಲಿಯೇ ಚರ್ಚಿಸಿಕೊಂಡೆವು. ಕುರಿಯನ್ನು ಕಟ್ಟಿದ್ದಾಯ್ತು. ನಮ್ಮ ನಮ್ಮ ಸ್ಥಳಗಳನ್ನು ನೋಡಿಕೊಂಡು ಕುಳಿತುಕೊಂಡೆವು. ನಾವು ಕುಳಿತಲ್ಲಿಗೂ ಕುರಿ ಇದ್ದ ಸ್ಥಳಕ್ಕೂ 20—25 ಗಜಗಳ ಅಂತರವಿತ್ತು. ಅಕಸ್ಮಾತ್ ಗಾಯಗೊಂಡ ಹುಲಿ ನಮ್ಮ ಕಡೆ ನುಗ್ಗಿ ಬಂದು ಹಿಂಸಿಸಬಹುದೆಂದು ನಮ್ಮ ಸ್ಥಾನವನ್ನು ಎತ್ತರದಲ್ಲಿ ಕಟ್ಟಿಕೊಂಡಿದ್ದೆವು. ಕುರಿಗೆ ಸಮೀಪದಲ್ಲಿ ಮನುಷ್ಯರು ಇರುವರೆನ್ನುವುದು ಗೊತ್ತಾಗದಂತೆ ನಾವಿಬ್ಬರೂ ಒಂದೆಡೆ ಕುಳಿತು ಕೊಂಡೆವು. ಆದಕ್ಕೆ ಮನುಷ್ಯರು ಸಮೀಪದಲ್ಲಿರುವುದು ಗೊತ್ತಾದರೆ ಅದು ಆ ಕಡೆಗೆ ನೋಡುತ್ತಾ ಕೂಗಲು ಪ್ರಾರಂಭಿಸುತ್ತದೆ. ಸಹಾಯ ಮಾನವನಿಗೂ ಬೇಕು. ಪ್ರಾಣಿಗೂ ಬೇಕು.

ನಾವೆಲ್ಲರೂ ಸಿದ್ಧರಾದ ಮೇಲೆ ಹಳ್ಳಿಗರು ಜೋರಾಗಿ ಕೂಗಾಡುತ್ತಾ ದೂರ ಹೋದರು. ಇದಕ್ಕೆ ಕಾರಣ ಹುಲಿಗೆ ಎಲ್ಲರೂ ಸಾಯಂಕಾಲವಾದ್ದರಿಂದ ಮನೆಯ ಕಡೆ ಹೋದರೆಂದು ತಿಳಿದುಕೊಳ್ಳಲಿ— ಎಂದು.

ರಾತ್ರಿಯಾಗುತ್ತಾ ಬಂತು. ನಾವಿಬ್ಬರೂ ಕಳ್ಳರಂತೆ ಕುಳಿತಿ

ದ್ದೆವು. ಕುರಿಯು ಆರ್ತಧ್ವನಿ ಮಾಡುತ್ತಿತ್ತು. ಪಾಪ! ತನ್ನ ಕೂಗು ವಿಕೆಯು ತನ್ನ ಮೃತ್ಯುವನ್ನು ಆಹ್ವಾನಿಸುತ್ತದೆ ಎಂಬುದು ಅದಕ್ಕೇನು ಗೊತ್ತು!

ಅಂದು ಹುಣ್ಣಿಮೆ. ಪ್ರಾಚೀದಿಶೆಯಲ್ಲಿ ಚಂದ್ರನು ಪ್ರಕಾಶಿಸ ತೊಡಗಿದನು. ಆಗ ನಮಗೆ ಬೆಳದಿಂಗಳ ಸೌರಭದ ಕಡೆಗೆ ದೃಷ್ಟಿ ಇರ ಲಿಲ್ಲ. "ಕಾಕಚೇಷ್ಟಾ ಬಕಧ್ಯಾನಂ" ಎಂಬಂತೆ ಹುಲಿಯನ್ನು ಎದುರು ನೋಡುತ್ತಿದ್ದೆವು. ಕುರಿಯು ಕೂಗುತ್ತಲೇ ಇತ್ತು. ಹುಲಿಯ ಪ್ರತೀಕ್ಷೆ ಯಲ್ಲೇ ನಾವಿದ್ದೆವು. 7—8—9 ಬಡಿಯಿತು. ಹುಲಿಯು ಬರುವ ಹಾಗಿದ್ದರೆ ಸಾಯಂಕಾಲವೇ ಬರಬೇಕಾಗಿತ್ತು. 10 ಹೊಡೆಯಿತು. ಹುಲಿಯು ಬರಲೇ ಇಲ್ಲ. ನೀಲಕಂಠ ಸಿಗರೇಟು ಪ್ಯಾಕು ಹೊರಕ್ಕೆ ತೆಗೆ ದನು. ನಾನು ತಡೆದೆ.

ಹನ್ನೊಂದೂವರೆಯಾಯ್ತು. ನಮ್ಮಿಂದ 4—5 ಫರ್ಲಾಂಗ್ ದೂರದಿಂದ ಸಾರಂಗವೊಂದು ಕೂಗುತ್ತಾ ಇರುವುದು ಕೇಳಿಬಂತು. ಸಾರಂಗ ಸಾಮಾನ್ಯವಾಗಿ ಭಯಭೀತಿ ಹೊಂದಿ ಅಥವಾ ಹುಲಿ ಮುಂತಾದ ದುಷ್ಟ ಮೃಗಗಳನ್ನು ನೋಡಿ ಹೀಗೆ ಕೂಗುತ್ತದೆ.

ಹುಲಿಯೇ ಅದನ್ನು ಅಟ್ಟಿಸಿಕೊಂಡು ಬರುತ್ತಿರಬಹುದು. ಆದ್ದ ರಿಂದ ನಾವು ನಮ್ಮ ನಮ್ಮ ಬಂದೂಕಗಳನ್ನು ಕೈಯಲ್ಲಿ ಹಿಡಿದುಕೊಂಡು ಕುಳಿತೆವು. ಎಚ್ಚರಿಕೆಯಿಂದ ಕಣ್ಣರಳಿಸಿ ನಾಲ್ಕುಕಡೆ ನೋಡತೊಡಗಿ ದೆವು. ಒಂದು ಗಂಟೆ ಹೊಡೆಯಿತು. ಹುಲಿಯ ಸುಳಿವೇ ಕಾಣಲಿಲ್ಲ. ಆದರೆ ನಾವು ಹತಾಶರಾಗಲಿಲ್ಲ. ತನ್ನ ಆಹಾರ—ಕುರಿಯು—ವನ್ನು ಹೊತ್ತುಕೊಂಡು ಹೋಗಲು ಹೊತ್ತಾಗಿಯಾದರೂ ಬರಬಹುದು. ಬೇಗ ಲಾದರೂ ಬರಬಹುದು—ಎಂಬ ಅನುಭವ ನಮಗಿತ್ತು. ಇಷ್ಟರಲ್ಲೇ ನಮಗೆ ಸುಮಾರು 20 ಗಜ ದೂರದಲ್ಲಿ 'ಸರಸಟ್' ಧ್ವನಿಯಾಯ್ತು. ಇದರಿಂದ ಅದು ಹುಲಿಯೇ ಇರಬೇಕೆಂದು ಭಾವಿಸಿದೆವು. ಸ್ವಲ್ಪ ಹೊತ್ತು ದೂರದಲ್ಲಿಯೇ ಕುಳಿತುಕೊಂಡು ಕುರಿಯ ಆಸುಪಾಸಿನಲ್ಲಿ ಯಾರಾದರೂ ಇದ್ದಾರೋ ಎಂದು ನೋಡಿ ಮೆಲ್ಲಮೆಲ್ಲನೆ ಕುರಿಯ ಕಡೆಗೆ ಬರತೊಡ ಗಿತು. ಹುಲಿಯು ಎದುರಿಗೆ ಬಂದದ್ದನ್ನು ನೋಡಿ ಕುರಿ ತನ್ನ ಕೂಗನ್ನು

ನಿಲ್ಲಿಸಿತ್ತು. ಕಾತರ ದೃಷ್ಟಿಯಿಂದ ಅದರ ಕಡೆಗೆ ನೋಡ ತೊಡಗಿತು. ಆದರ ಚಂಚಲ ಪುಚ್ಛವು ಗಾಳಿಯಲ್ಲಿ ಹಾರಾಡುತಿತ್ತು. ಸಮ್ಮುಖದಲ್ಲಿ ಮೃತ್ಯುವು ತಾಂಡವವಾಡುತ್ತಿರುವುದನ್ನು ನೋಡಿ ಕುರಿ ಕಂಪಿಸಲು ಪ್ರಾರಂಭಿಸಿತು. ಹುಲಿಯು ನಮ್ಮ ದೃಷ್ಟಿಗೆ ಸರಿಯಾಗಿ ಇನ್ನೂ ಬಿದ್ದಿರಲಿಲ್ಲ. ಸ್ವಲ್ಪ ಹೊತ್ತಿನ ಮೇಲೆ ಹುಲಿಯ ಕೆಂಡದಂತಹ ಕಣ್ಣುಗಳು ಸಮೀಪಿಸುತ್ತಾ ಬಂದವು. ನಾನು ನೀಲಕಂಠನನ್ನು ನನ್ನ ಮೊಣಕೈಯಿಂದ ಎಚ್ಚರಿಸಿದೆ. ಅವನೂ ಅದೇ ರೀತಿ ಸಂಕೇತ ಕೊಟ್ಟನು. ಶಿಕಾರಿ ಸಮಯದಲ್ಲಿ ಮಾತನಾಡುವುದು, ಓಡಾಡುವುದು, ಶಬ್ದ ಮಾಡುವುದು ಮೂರ್ಖತನ. ನಾವು ಮೂಕ ಸಂಕೇತದಿಂದ ಸಿದ್ಧರಾದೆವು. ಹುಲಿಯು ಬೆಕ್ಕಿನಂತೆ ಮೆಲ್ಲಮೆಲ್ಲನೆ ಬರತೊಡಗಿತು. ಇನ್ನೊಂದು ಕ್ಷಣಾರ್ಧದಲ್ಲಿ ಕುರಿಯ ಮೇಲೆ ಹಾರುವುದಿದೆ. ಅಷ್ಟರಲ್ಲಿ ನೀಲಕಂಠ ತನ್ನ ಬಂದೂಕಿನಿಂದ ಒಂದು ಗುಂಡನ್ನಾರಿಸಿದನು. ಹುಲಿ ಹೃದಯವನ್ನು ಕಂಪಿಸುವಂತಹ ಗರ್ಜನೆಯಿಂದ ಉತ್ತರ ಕೊಟ್ಟಿತು. ಹುಲಿಗೆ ಗುಂಡೇನೋ ತಗಲಿತ್ತು. ಆದರೆ ಮರ್ಮಸ್ಥಾನದಲ್ಲಿ ಬಿದ್ದಿರಲಿಲ್ಲ. ಹೊಟ್ಟೆಗೆ ಏಟು ಬಿದ್ದಿತ್ತು. ನಾನು ನನ್ನ ಬಂದೂಕನ್ನು ಕೈಗೆ ತೆಗೆದುಕೊಂಡೆ. ನಾನು ಹೊಡೆದು ಅದನ್ನು ಕೆಡವ ಬಹುದಾಗಿತ್ತು. ಆದರೆ ಅಂದಿನ ಸರದಿ ನೀಲಕಂಠನದಾಗಿತ್ತು. ಆದ್ದರಿಂದ ಸುಮ್ಮನಾದೆ.

ಪೆಟ್ಟು ತಿಂದ ಹುಲಿ ಒಂದು ಸಾರಿ ಘರ್ಜಿಸಿ ವಿದ್ಯುತ್‌ಗತಿಯಿಂದ, ಅಂದಾಜಿನಿಂದ ನಮ್ಮ ಕಡೆಗೆ ತಿರುಗಿತು. ನಮ್ಮ ಪ್ರಾಣವೇ ಹಾರಿ ಹೋದಂತಾಯಿತು. ಎಲ್ಲಿ 'ಸರ್ವ ವೈ ಪೂರ್ಣಸ್ವಾಹಾ' ಆಗುತ್ತದೆಯೋ ಎಂದುಕೊಂಡೆವು. ನಮ್ಮ ಮೇಲೆ ರಭಸದಿಂದ ಬರುತ್ತಿರುವ ಹುಲಿಗೆ Fire ಮಾಡಿದೆ. ಆದರೆ ಗುರಿ ತಪ್ಪಿತು. ರಾತ್ರಿ ಸಮಯ. ಅದೂ ಓಡುತ್ತಿರುವ ಹುಲಿಯ ಮೇಲೆ ಹಾರಿಸುವುದೆಂದರೆ!! ತಕ್ಷಣ ಬರಿಯ ಬಂದೂಕವನ್ನು ಆದರ ಮೇಲೆ ಎಸೆದೆ.

ನೀಲಕಂಠ ಹೊಸದೊಂದು ತೋಪನ್ನು ಹಾಕಿಕೊಳ್ಳುವುದರಲ್ಲಿದ್ದನು. ಅಷ್ಟರಲ್ಲಿ ಹುಲಿಯು ತನ್ನ ಪಂಜವನ್ನೊಮ್ಮೆ ನಮ್ಮ ಕಡೆ ಬೀಸಿತು. ನಾವು ಕುಳಿತಿದ್ದ ತೂಗುಮಣೆ ಕಳಚಿ ಬಿತ್ತು. ನಾನು

ಇನ್ನೊಂದು Fire ಮಾಡಿದೆ. ಅದು ತನ್ನ ಇನ್ನೊಂದು ಪಂಜದಿಂದ ವಜ್ರಘಾತ ಮಾಡಿತು. ನೀಲಕಂಠನಿಗೆ ಬಹಳ ಏಟು ಬಿತ್ತು. ಅವನು ನಿರ್ಜೀವ ಶರೀರದಂತೆ ದೂರ ಹೋಗಿ ಬಿದ್ದನು. ಅದು ಬಹಳ ಏಟು-ಎಂದಷ್ಟೇ ಅವನ ಬಾಯಿಂದ ಹೊರಟ ಶಬ್ದಗಳು. ಅವನ ಬಂದೂಕು ನನ್ನ ಕಡೆಗೆ ಬಂದುಬಿತ್ತು. ನನ್ನ ತಲೆ ತಿರುಗಹತ್ತಿತ್ತು. ಕಣ್ಣು ಕಪ್ಪಿಟ್ಟಿತು. ಹುಲಿಗೆ ಹೆದರಿಯಲ್ಲ. ಆದರೆ ವೃದ್ಧಮಾತೆಯು ಏಕಮಾತ್ರ ಪುತ್ರನಾಗಿದ್ದ ನೀಲಕಂಠನಿಗಾದ ಸ್ಥಿತಿಯನ್ನು ನೋಡಿ. ಅವನ ಹೆಂಡತಿ ಈ ವಿಷಯವನ್ನು ಕೇಳಿ........ ಎಷ್ಟು ದುಃಖಿಸುವಳೋ! ನೀಲಕಂಠನ ಮನೆಯಲ್ಲಿ ಇದ್ದವರು ಮೂರು ಮಂದಿ. ಅವನ 20 ವರ್ಷದ ಹೆಂಡತಿ. 5–6 ತಿಂಗಳ ಒಂದು ಮಗು. ಅವನ 75 ವರ್ಷದ ತಾಯಿ. ಇಂತಹ ಕುಟುಂಬಕ್ಕೆ ಇಂತಹ ವಿಪತ್ತು. ವಜ್ರಘಾತ ಸಮಾನ ಸಮಾಚಾರ ವನ್ನು ತಿಳುಹಿಸುವವನು ನಾನು! ಇದು ನನ್ನಿಂದ ಹೇಗೆ ಸಾಧ್ಯ? ನಾನು ಯಾವ ಮುಖದಿಂದ ಊರಿಗೆ ಹೋಗಲಿ!

ನೀಲಕಂಠನನ್ನು ಹೊತ್ತುಕೊಂಡು ಹುಲಿ ಎಲ್ಲಿ ಓಡಿತೋ ತಿಳಿಯಲೇ ಇಲ್ಲ. ಈ ವಿಚಾರ ನನ್ನ ಮನಸ್ಸಿಗೆ ಬಂದೊಡನೇ ನಾನು ಹುಚ್ಚನಾದೆ. ನೀಲಕಂಠನನ್ನು ಹುಡುಕಬೇಕು! ಎಲ್ಲಿಂದು ಹುಡುಕುವುದು? ಕತ್ತಲು! ಕತ್ತಲೆ ಎಂದು ಬಿಟ್ಟರೆ ಬೆಳಗಾಗುವವರೆಗೂ ಹೀಗೆಯೇ ಕುಳಿತುಕೊಳ್ಳಲು ಆಗುತ್ತದೆಯೇ? ನನ್ನ ಜೀವವು ಹೋಗಿದ್ದರೆ ಚೆನ್ನಾಗಿತ್ತಲ್ಲಾ! ದೇವರೇ—ಈ ರೀತಿ ಉದ್ವಿಗ್ನನಾಗಿ ನೀಲಕಂಠನ ರೈಫಲನ್ನು ತೆಗೆದುಕೊಂಡು ಅವನನ್ನು ಹುಡುಕಲು ಹೊರಟೆ. 20–25 ಗಜಗಳ ತಗ್ಗು ದಿಣ್ಣೆಯೊಂದನ್ನು ಇಳಿದುಬಂದೆ. ಅಲ್ಲೊಂದು ಉದ್ದನೆಯ ಶರೀರವಿತ್ತು. ನೀಲಕಂಠನದ್ದಾಗಿರಬಹುದೇ! ಹತ್ತಿರ ಬಂದೆ. ನಾನು ಯೋಚಿಸಿದ್ದಂತೆ ನೀಲಕಂಠನದ್ದಾಗಿರಲಿಲ್ಲ. ಆದರೆ ಹುಲಿಯು ಸತ್ತು ಬಿದ್ದಿತ್ತು.

ನೀಲಕಂಠನನ್ನು ಪೂರೈಸಿ ತಾನೂ ಸತ್ತು ಹೋಗಿದೆ ದುಷ್ಟ ಪ್ರಾಣಿ. ಎಂದು ಯೋಚಿಸಿದೆ. ಹೀಗೆ ಯೋಚಿಸುತ್ತಲೇ ಇದ್ದೆ. ಹುಲಿಯ ಶವವು ಅಲುಗಾಡಿತು. ನಾನು ರೈಫಲಿನಿಂದ ಅದರ ತಲೆಗೆ

ಗುರಿಯಿಟ್ಟು ಹೊಡೆಯದೇ ಇದ್ದಿದ್ದರೆ ಅದು ನನ್ನನ್ನು ಮುಗಿಸಿ ಬಿಡುತ್ತಿತ್ತು. ಹುಲಿಯೇನೋ ಸತ್ತಿತು. ಆದರೆ ನೀಲಕಂಠನನ್ನು ಹುಡುಕಬೇಕಾಗಿತ್ತು. ಕೊಂದು ಹಾಕಿಬಿಡಲೇನೋ ಎಂದನ್ನುವಷ್ಟು ಕೋಪ ಬಂತು ಕುರಿಯ ಮೇಲೆ. ಅದನ್ನು ತಂದ ಮುಹೂರ್ತ ಒಳ್ಳೆಯದಲ್ಲವೆಂದುಕೊಂಡೆ, ಸುತ್ತಲೂ ಹುಡುಕಿದೆ. ಆದರೆ ನೀಲಕಂಠ ಸಿಗಲಿಲ್ಲ. ಸೋತು ಉತ್ಸಾಹಹೀನನಾಗಿ ನಾವು ಕುಳಿತಿದ್ದ ಸ್ಥಳಕ್ಕೇ ಹಿಂತಿರುಗುತ್ತಿದ್ದೆ. ಅಲ್ಲೊಂದು ಪೊದೆ. ಪೊದೆಯ ಮೇಲೆ ನೀಲಕಂಠನನ್ನು ಕಂಡೆ. ನನ್ನ ಶ್ವಾಸವೇ ನಿಂತಿತು. ಹೃದಯದ ಗತಿ ತೀವ್ರವಾಯ್ತು. ಬದುಕಿದ್ದಾನೆಯೋ ಇಲ್ಲವೋ ಎಂದು ಮನಸ್ಸು ಯೋಚಿಸಿತು. ಸಂದಿಗ್ಧಾವಸ್ಥೆಯಲ್ಲಿ ಸಿಕ್ಕಿ ನಾನು ಸುಳಿಯಲ್ಲಿ ಸಿಕ್ಕಿಕೊಂಡ ಕೋಲಿನಂತೆ ಮುಳುಗೇಳುತ್ತಲಿದ್ದೆ. ಮೆಲ್ಲನೆ ಅವನ ಹತ್ತಿರಕ್ಕೆ ಹೋದೆ. ಅವನ ನಾಡಿ ಹಿಡಿದು ನೋಡಿದೆ. ಹಾ! ಇದೇನು! ನಾಡಿಯಾಡುತ್ತಿದೆ. ಅದೂ ಮಂದಸ್ಥಿಯಲ್ಲಿ. ಕ್ಷಣವೂ ತಡೆಯದೆ ಜೇಬಿನಿಂದ ಬ್ರಾಂಡಿ ಬಾಟಲ್ ತೆಗೆದು ಅವನಿಗೆ ಕುಡಿಸಿದೆ. ಬ್ರಾಂಡಿ ಕುಡಿದ ಸ್ವಲ್ಪ ಹೊತ್ತಿನಲ್ಲಿ ನೀಲಕಂಠ ಕಣ್ಣು ಬಿಟ್ಟನು. ಮತ್ತು ಅಲುಗಾಡಲು ಪ್ರಾರಂಭಿಸಿದನು.—ಏಳು, ಬೆಂಕಿ ಪೆಟ್ಟಿಗೆ ತಾ. ಬೆಂಕಿ ಮಾಡುತ್ತೇನೆ. ಶೀತದಿಂದ ಕೈಕಾಲುಗಳೆಲ್ಲಾ ಸೆಟೆದು ಹೋಗಿವೆ ನಿನ್ನವು; ಹತ್ತಿರದಲ್ಲಿ ಹುಲಿ ಸತ್ತು ಬಿದ್ದಿದೆ.

ನೀಲಕಂಠ—ಸತ್ತು ಬಿದ್ದಿದೆ!

ನಾನು—ಹಾ! ಹೌದು. ಸತ್ತು ಬಿದ್ದಿದೆ. ನನ್ನ ಗುಂಡಿನಿಂದ ಇಂದು ಸಾವಿತ್ತು ಅದಕ್ಕೆ.

× × ×

ಬೆಂಕಿ ಹೊತ್ತಿಸಿದ್ದಾಯ್ತು. ಬೆಂಕಿ ಬೆಳಕಿನಲ್ಲಿ ಅವನ ಗಾಯಗಳಿಗೆ ಪಟ್ಟುಗಳನ್ನು ಕಟ್ಟುವುದರಲ್ಲೇ ಬೆಳಗಾಯ್ತು. ಮುಂದೆ ಬಂದ ಹುಲಿಯನ್ನು ಹೊಡೆಯುವುದಕ್ಕಾಗಿ ಮೊದಲು ನೀಲಕಂಠ Fire ಮಾಡಿದ. ಆದರೆ ಅದಕ್ಕೆ ಏಟು ಬೀಳಲಿಲ್ಲ. ಗರ್ಜಿಸುತ್ತಾ ನಮ್ಮ ಕಡೆ ಬಂತು. ಆಗ ನೀಲಕಂಠ ಮುಂದೆ ಇದ್ದ. ಇನ್ನೊಂದು Fire ಮಾಡ

ಬೇಕೆಂಬುದರಲ್ಲೇ ಹುಲಿ ತನ್ನ ಪಂಜದಿಂದ ಹೊಡೆದಿದ್ದು. ಅದು ಹೊಡೆದ ರಭಸಕ್ಕೆ ನೀಲಕಂಠ ದೂರ ಹೋಗಿ ಬಿದ್ದ. ರೈಫಲ್ಲು ನನ ಕಡೆಗೆ ಬಂದು ಬಿತ್ತು. ಅವನ ಭುಜದ ಮೇಲೆ ಹುಲಿಯು ತನ್ನ ಪಂಜ ದಿಂದ ಹೊಡೆದಿತ್ತು.

× × ×

ಭುಜದ ಮೇಲಿನ ಗಾಯವು ವಾಯಲು ಹೆಚ್ಚು ದಿನ ತೆಗೆದು ಕೊಂಡಿತು. ಹುಲಿ ಹೊಡೆಯಿತೆಂದು ಯಾರೊಡನೆಯೂ ಹೇಳಲಿಲ್ಲ. ಆದರೆ ಎತ್ತರದಿಂದ ಬಿದ್ದದ್ದರಿಂದ ಭುಜದ ಮೇಲಿನ ಗಾಯವಾಯ್ತೆಂದು ಪ್ರತೀತಿ ಹುಟ್ಟಿಸಿದ್ದೆವು. ಹಾಗಲ್ಲದಿದ್ದರೆ ಅವರ ತಾಯಿ ಸುಮ್ಮನಿರುತ್ತಿದ್ದಿಲ್ಲ. 10—12 ದಿನ ನೀಲಕಂಠ ರಜ ತೆಗೆದು ಕೊಂಡನು. ಅಷ್ಟರಲ್ಲೇ ಗಾಯ ವಾಸಿಯಾಯ್ತು. ನಮ್ಮಿಬ್ಬರನ್ನು ಮೃತ್ಯು ಮುಖದಿಂದ ಸಂರಕ್ಷಿಸಿದ ದೈವವನ್ನು ಕೊಂಡಾಡಿದೆವು.



೩

# ರಾಮೂ

I

ದಾಸಪ್ಪ ತನ್ನ ರಾಮೂನನ್ನು ಆಡಿಸಿ ಜೀವನ ಮಾಡುತ್ತಿದ್ದನು. ಅವನು ಮತ್ತು ಅವನ ಹೆಂಡತಿ ರಾಮಿ ಇಬ್ಬರೂ ಅದನ್ನು ಬಹುವಾಗಿ ಪ್ರೀತಿಸುತ್ತಿದ್ದರು. ಅವರಿಗೆ ಮಕ್ಕಳಿರಲಿಲ್ಲ. ರಾಮೂವೇ ಅವರ ಸ್ನೇಹ ಮತ್ತು ಪ್ರೇಮಗಳಿಗೆ ಪಾತ್ರವಾಗಿತ್ತು. ಜೊತೆಯಲ್ಲೇ ಊಟ ಮಾಡಿಸುತ್ತಿದ್ದರು. ಮಲಗಿಸಿಕೊಳ್ಳುತ್ತಿದ್ದರು. ಅವರ ದೃಷ್ಟಿಯಲ್ಲೀ ರಾಮೂನನ್ನು ಬಿಟ್ಟು ಬೇರೊಂದು ಪ್ರಿಯ ವಸ್ತುವೇ ಇರಲಿಲ್ಲ. ದಾಸಪ್ಪ ಅದಕ್ಕಾಗಿ ಒಂದು ಚೆಂಡು ತಂದು ಕೊಟ್ಟಿದ್ದನು. ಅದು ಹೊರಗಡೆ ಆಡುತ್ತಿದ್ದರೆ ಅವರಿಬ್ಬರಿಗೆ ಅತ್ಯಾನಂದ, ಅದರ ಆಟದ ನೋಟ ಕಣ್ಣಿಗೊಂದು ಹಬ್ಬ. ಅದಕ್ಕೆ ಊಟ ಮಾಡಲು ಒಂದು ಮಣ್ಣಿನ ತಟ್ಟೆಯಿತ್ತು. ಹೊದೆಯಲು ಒಂದು ಕಂಬಳಿ ತುಂಡು. ಮಲಗಲು ಒಂದು ಹರಕು ಹಾಸಿಗೆ. ಆಟ ಆಡಲು ಒಂದು ಹಗ್ಗ ನೇತು ಬಿಟ್ಟಿತ್ತು. ರಾಮುವಿಗೆ ಇವುಗಳನ್ನು ಕಂಡರೆ ಪ್ರಾಣ. ತನ್ನ ಮಣ್ಣಿನ ತಟ್ಟೆಯಲ್ಲಿ ತಿಂಡಿ ಇಡದ ಹೊರತು ಅದು ತಟ್ಟೆಯ ಹತ್ತಿರ ಸುಳಿಯುತ್ತಲೇ ಇರಲಿಲ್ಲ. ಅದಕ್ಕೆ ಹರಕು ಹಾಸಿಗೆ ಸುಪ್ಪತ್ತಿಗೆಗೆ ಸಮಾನವಾಗಿತ್ತು. ಅದು ಸುಖವಾಗಿ ದಿನಗಳೆಯುತ್ತಿತ್ತು. ಬೆಳಗ್ಗೆ ಬೇಗ ಎದ್ದು ಅವರ ಜೊತೆಗೆ ರೊಟ್ಟಿ ತಿಂದು ದಾಸಪ್ಪನ ಜೊತೆಗೆ ಆಟವಾಡಲು—ಭಿಕ್ಷೆ ಬೇಡಲು ಹೋಗುತ್ತಿತ್ತು. ಅದರಲ್ಲಿ ನೋಡುವವರನ್ನು ಬೆರಗು ಮಾಡುತ್ತಿತ್ತು. ಕೋಲನ್ನೂರಿಕೊಂಡು ಮುದುಕನಂತೆ ನಡೆಯುವುದು, ದೇವರ ಪೂಜೆ ಮಾಡುವುದು, ಹೆಗಲ ಮೇಲೆ ಕೋಲನ್ನಿರಿಸಿ ಕೊಂಡು ಕಾಯುವುದು, ಕೋಲಿನ ಮೇಲೆ ಹಾರುವುದು. ಹಾಡುವಂತೆ ನಟಿಸುವುದು, ಡೋಲು ಬಾರಿಸುವುದು, ಕೊನೆಯಲ್ಲಿ ಭಿಕ್ಷೆ ಎತ್ತುವುದು—ಇವೆಲ್ಲವೂ ಜನರಿಗೆ ಆಶ್ಚರ್ಯವನ್ನುಂಟುಮಾಡುತ್ತಿತ್ತು. ಆಟ ಮುಗಿದ ಕೂಡಲೇ ಅದು ಎಲ್ಲರಿಗೂ ಸಲಾಂ ಮಾಡಿ, ಅವರ ಕಾಲುಗಳನ್ನು ಮುಟ್ಟಿ ಮುಟ್ಟಿ

ದೈನ್ಯ ಮುದ್ರೆಯಿಂದ ಬೇಡುತ್ತಿತ್ತು. ಕ್ಷಣಾರ್ಧದಲ್ಲಿ ಬೇಕಾದಷ್ಟು ದುಡ್ಡು ಒಟ್ಟಾಗುತ್ತಿತ್ತು. ಇದಾದ ಮೇಲೆ ಅದಕ್ಕೆ ಕೆಲವರು ಹಣ್ಣು ಗಳನ್ನು ಕೊಡುವರು, ಹುಡುಗರು ಮಿಠಾಯಿ—ಬಿಸ್ಕುಟುಗಳನ್ನು ಕೊಡುವರು. ದಾಸಪ್ಪ ಒಂದು ಮುರುಕು ಮನೆಯಲ್ಲಿ ವಾಸಮಾಡಿ ಕೊಂಡಿದ್ದನು. ಆ ಗಲ್ಲಿಯವರಿಗೆಲ್ಲಾ ಮನೋರಂಜಕವಾಗಿತ್ತು ರಾಮು. ಏನಾದರೂ ತಂದು ಕೊಡುತ್ತಲೇ ಇದ್ದರು. ರಾಮು ವಿಗೆ ನಾಯಿಗಳನ್ನು ಕಂಡರೆ ವೈರ. ನಾಯಿಗಳು ಹತ್ತಿರ ಸುಳಿ ಯಲು ಬಿಡುತ್ತಿರಲಿಲ್ಲ. ಅದರ ನಿತ್ಯದ ಕೆಲಸ ಇನ್ನೊಂದಿತ್ತು. ರಾಮಿ ಬಿಸಿಲಿನಲ್ಲಿ ಮೋಟು ಜಗಲಿ ಮೇಲೆ ಮಲಗಿಕೊಂಡರೆ, ಅವಳ ತಲೆಯಿಂದ ಹೇನುಗಳನ್ನು ತೆಗೆದು ಹಾಕುತ್ತಿತ್ತು. ಅವಳ ಹಿಂದೆ ಯಾವಾಗಲೂ ಇರುತ್ತಿತ್ತು. ತಾಯಿಮಕ್ಕಳಲ್ಲಿ ಇಲ್ಲದ ಪ್ರೀತಿ ಇವರಲ್ಲಿತ್ತು.

## II

ಒಂದುದಿನ ರಾಮುನಿಗೆ ಎಲ್ಲಿಯಾದರೂ ಹೋಗಿ ಕಾಯಿ ಹಂಣು ಗಳನ್ನು ತಿನ್ನೋಣವೆನಿಸಿತು. ಹಣ್ಣು ಕಾಯಿ ಏನೋ ಸಿಗುತ್ತಿತ್ತು. ಆದರೆ ಮರ ಹತ್ತಿ ಕುಣಿದು, ಮರದಿಂದ ಮರಕ್ಕೆ ಹಾರಬೇಕೆಂಬ ಇನ್ನೊಂದು ಆಸೆಯಾಯ್ತು. ಕೋತಿಗಳು ವಿನೋದಶೀಲವಾಗಿರುತ್ತವೆ. ಆದರೆ ರಾಮುನಿಗೆ ಈ ಗುಣ ಸ್ವಲ್ಪ ಅಧಿಕವಾಗಿಯೇ ಇತ್ತು. ಎಷ್ಟೋ ಸಾರಿ ಹೋಗಿ ಸಿಕ್ಕಿಬಿದ್ದು, ಗೋಳಾಡಿದ್ದು, ಹೊಡೆತಗಳು ತಿಂದದ್ದೂ ಆಗಿತ್ತು. ಜಲ—ವಾಯು ಆಕಾಶಗಳಲ್ಲಿ ತನ್ನ ಅಧಿಕಾರವನ್ನು ಹೊಂದಿದ್ದ ಮಾನವನು ಮರಗಿಡಗಳ ಮೇಲೆ ಇನ್ನು ಅಧಿಕಾರವನ್ನು ಚಲಾಯಿಸದೆ ಇರುವನೋ ಎಂಬುದು ಅದರ ಮೊಂಡು ಬುದ್ಧಿಗೆ ಹೊಳೆ ಯದೇ ಹೋಯ್ತು. ಮಧ್ಯಾಹ್ನ ಪೇಟೆ ಕಡೆ ಆಟ ಆಡಿಕೊಂಡು ಬಂದ ಮೇಲೆ ರಾಮು ಇತ್ತ ಹೊರಟಿತು. ಪ್ರತಿದಿನದಂತೆ ಅದು ಎಲ್ಲಿಯೋ ಹೋಯ್ತೆಂದು ಎಲ್ಲರೂ ತಿಳಿದುಕೊಂಡರು. ರಾಮು ಚಪ್ಪರದ ಮೇಲೆ ಹಾರುತ್ತಾ, ಏರುತ್ತಾ ಹತ್ತಿರದಲ್ಲೇ ಇದ್ದ ಪೋಲೀಸ್ ಇನ್‌ಸ್ಪೆಕ್ಟ ರವರಾದ ದುಗ್ಗಯ್ಯನವರ ತೋಟಕ್ಕೆ ಹೋಯ್ತು. ಮರಗಳು ಹಂಣು

ಗಳಿಂದ ತುಂಬಿ ತುಳುಕುತಿದ್ದುವು ಮಾವು. ನೇರಿಲೆ, ಬೇಲ-ದ ಮರಗಳು ಭರ್ತಿ ಇದ್ದವು. ಆಗ ಮಾವಿನ ಹಣ್ಣಿನ ಕಾಲ—ತುಂಬಿ ಸುರಿದಿತ್ತು. ನೇರಲೆ ಹಣ್ಣಾಗಿತ್ತು. ಭಾರದಿಂದ ಬಾಗಿದ ಮರಗಳು ಅದನ್ನು ತನ್ನೆಡೆ ಕರೆಯುತ್ತಿರುವಂತೆ ಕಾಣಿಸಿತು. ಸರಿ. ಮರದ ಬಳಿ ಹೋಯ್ತು. ಮರವೇರಿದ್ದಾಯ್ತು. ತೃಪ್ತಿಯಾಗುವಷ್ಟು ತಿಂದದ್ದಾಯ್ತು. ಮಿತಿ ಮೀರಿದ ಆನಂದದ ಭರದಿಂದ ಹಣ್ಣು ಕಿತ್ತು ಎಸೆಯಲು ಪ್ರಾರಂಭಿಸಿತು. ಅರ್ಧ ಕಚ್ಚಿತಿಂದು ಎಷ್ಟೋ ಹಣ್ಣುಗಳನ್ನು ಎಸೆಯಿತು. ಹಣ್ಣುಗಳು ಬೀಳುವ ಶಬ್ದ ತೋಟ ಕಾಯುತ್ತಾ ಇದ್ದ ತೋಟದ ಆಳನ್ನು ನಿದ್ದೆಯಿಂದ ಎಚ್ಚರಿಸಿತು. ರಾಮುವನ್ನು ನೋಡಿದ್ದೇ ಸರಿ! ಕಲ್ಲು ಬೀರಲಾರಂಭಿಸಿದನು. ಅದರ ಹತ್ತಿರಕ್ಕೆ ಒಂದು ಕಲ್ಲೂ ಹೋಗುತ್ತಿರಲಿಲ್ಲ. ಹೋದ ಕಲ್ಲುಗಳಿಂದ ತಪ್ಪಿಸಿಕೊಳ್ಳುತ್ತಿತ್ತು. ಹಲ್ಲು ಕಿರಿದು ಹೆದರಿಸಿದನು, ಅದು ಅಣಕಿಸಿತು. ಈ ತಮಾಷೆ ನೋಡಲು ಆ ಗಲ್ಲಿಯ ಹುಡುಗರೆಲ್ಲಾ ಓಡಿಬಂದು ಸೇರಿಕೊಂಡರು. ಕೋತಿಯನ್ನು ನೋಡಿದರು.

"ಕೋತಿ! ಕೋತಿ! ಮಂಗಣ್ಣಾ!"
ನಮುಗೊಂದ್ಹಣ್ಣು ಕೊಡಣ್ಣಾ!
ಮರದಿಂದ ಮರಕ್ಕೆ ಹಾರಣ್ಣಾ!
ನಮುಗೊಂದು ಹಣ್ಣು ಬೀಳ್ಸಣ್ಣಾ!

ಎಂದು ಹಾಡತೊಡಗಿದರು. ಈ ಹಾಡಿನಿಂದ ಕೋತಿಗೆ ಇನ್ನೂ ಆನಂದವಾಯ್ತು. ಹಣ್ಣುಗಳನ್ನು ಅರ್ಧಕಚ್ಚಿ ದಬದಬ ಬೀಳಿಸಲು ಪ್ರಾರಂಭಿಸಿತು. ಈ ಕೋತಿಯನ್ನು ಅಡಗಿಸೋದಕ್ಕೆ ತನ್ನಿಂದ ಸಾಧ್ಯವಿಲ್ಲವೆಂದು ತೋಟದಾಳು ಅಯ್ಯನವರ ಹತ್ತಿರ ಹೋಗಿ ದೂರು ಹೇಳಿದನು. "ಅರೆ, ತೋಟದ ಕ್ರಯ ನಾನು ಕೊಡುತ್ತೇನೊ ಅಥವಾ ಈ ಕೋತಿ ಮುಂಡೇದು ಕೊಡುತ್ತೊ! ನನ್ನ ಹೆಸರು ಕೇಳಿದರೆ ಜನ ಹಾಗೆ ನಡುಗುತ್ತಾರೆ. ಈ ಕೋತಿ ಇಷ್ಟು ಅವಾಂತ್ರ ಮಾಡುತ್ತದಾ" ಎಂದ್ಕೊಂಡು ಬಾರುಮಾಡಿದ ಬಂದೂಕನ್ನು ಸರ್‍ರನೆ ತೆಗೆದುಕೊಂಡು ತೋಟದ ಕಡೆಗೆ ಹೊರಟು ಹೋದರು.

ಹಣ್ಣಿನಿಂದ ತುಂಬಿ ಸುರಿದಿರುವ ಒಂದು ಕೊಂಬೆಯನ್ನು

ಅಲ್ಲಾಡಿಸುತ್ತಾ ಇದೆ ರಾಮು. ಅವರಿಗೆ ಕೋಪ ಮಿತಿಮೀರಿತು. ಬಂದೂಕನ್ನು ಅದರ ಕಡೆಗೆ ಹಿಡಿದರು. ಹಾಗೆ ಹಿಡಿದರೋ ಇಲ್ಲವೋ ರಾಮೂ ಆಟವೆಲ್ಲಾ ಒಂದಾಯ್ತು. ಇದುವರೆಗೂ ಯಾರೂ ಅದರ ಮೇಲೆ ಬಂದೂಕು ಗುರಿ ಇಟ್ಟಿರಲಿಲ್ಲ. ಬಂದೂಕಿನ ಶಬ್ದ ಪರಿಚಯವಾಗಿತ್ತಷ್ಟೆ. ಹಕ್ಕಿಯನ್ನು ಹೊಡೆಯಲು ಉಪಯೋಗಿಸುತ್ತಾರೆಂದಷ್ಟೇ ತಿಳಿದುಕೊಂಡಿತ್ತು. ಅದಕ್ಕೆ ಹೆದರಿಕೆಯಿಂದ ಕಾಲು ಮುಂದೆ ಇಡದಂತಾಯ್ತು. ಅದು ಮೊದಲು ಕುಳಿತಿದ್ದ ಕೊಂಬೆಯ ಮೇಲೆ ಅಲುಗದೆ ಕುಳಿತುಕೊಂಡಿತು. ಅದರ ಸ್ಥಿತಿಯನ್ನು ನೋಡಿ ಅಯ್ಯನವರಿಗೆ ದಯೆ ಬಂದಿತು. ಅದನ್ನು ಹಿಡಿದು ತರುವಂತೆ ಆಳಿಗೆ ಹೇಳಿದರು. ಆಳಿಗೆ ಬಹಳ ಹೆದರಿಕೆಯಾಯ್ತು. ಆದರೇನು ಮಾಡೋದು? ಅಯ್ಯನವರ ಕೋಪದ ಪರಿಚಯ ಚೆನ್ನಾಗಿತ್ತು ಅವನಿಗೆ. ಮರವೇರಿ ಅದನ್ನು ಹಿಡಿದು ತಂದನು. ಅದರ ಸೊಂಟವನ್ನು ಹಗ್ಗದಿಂದ ಬಿಗಿದರು.

ರಾಮು ಈಗ ದುಗ್ಗಯ್ಯನವರ ಮನೆಯ ಬಾಗಿಲಿನ ಮುಂದಿರುವ ಕಂಭಕ್ಕೆ ಕಟ್ಟಲ್ಪಟ್ಟಿತು. ಆಗಿನ ಸ್ವಚ್ಛಂದತೆ, ಈಗಿರಲಿಲ್ಲ. ಬೆಳಗಿನಿಂದ ರಾತ್ರಿಯವರೆಗೂ ಕರುಣಾಪೂರಿತವಾಗಿ ಕೂಗುತ್ತಿತ್ತು. ಸಾಯಂಕಾಲವಾಗುತ್ತಲೇ ಅದರ ಮುಂದೆ ಸ್ವಲ್ಪ ಅನ್ನವನ್ನು ಚೆಲ್ಲುತ್ತಿದ್ದರು. ರಾಮುಗೆ ತನ್ನ ಸ್ಥಿತಿ ಪರಿವರ್ತನೆಯ ಜ್ಞಾನವುಂಟಾಯಿತು. ಕಂಬಳಿಯ ತುಂಡಿಲ್ಲ. ಚಾಪೆಯಿಲ್ಲ. ಬರಿಯ ನೆಲದ ಮೇಲೆ ಒರಗಿರಬೇಕಾಯ್ತು. ಅನ್ನದ ಒಂದಗುಳನ್ನೂ ಸಹಾ ಮುಟ್ಟಲಿಲ್ಲ. ಹಣ್ಣನ್ನು ತಿನ್ನಲು ಏಕೆ ಹೊರಟೆ? ಎಂದು ತನ್ನಲ್ಲೇ ಸಂತಪಿಸುತ್ತಿತ್ತು. ದಾಸಪ್ಪ ತನ್ನಲ್ಲಿಟ್ಟಿದ್ದ ಪ್ರೀತಿಯ ನೆನಪಾಯ್ತು. ಪಾಪ! ಆತನು ನನ್ನನ್ನು ಹುಡುಕಿ ಹುಡುಕಿ ಬೇಸತ್ತಿರಬಹುದು. ರಾಮಿಯು ನನಗಾಗಿ ರೊಟ್ಟಿಯನ್ನು ಹಿಡಿದುಕೊಂಡು "ರಾಮೂ ರಾಮೂ" ಎಂದು ಕೂಗುತ್ತಿರಬಹುದು. ಅಯ್ಯೋ! ವಿಪತ್ತೇ! ನನ್ನನ್ನು ಎಲ್ಲಿಗೆ ತಂದು ಸಿಕ್ಕಿಸಿದೆ!

ರಾತ್ರಿಯೆಲ್ಲಾ ಅದು ಎಚ್ಚತ್ತೇ ಇತ್ತು. ಬಾರಿಬಾರಿಗೂ ಅದು ಕಂಭವನ್ನು ಸುತ್ತುತ್ತಿತ್ತು. ದುಗ್ಗಯ್ಯನವರ ಟಾಮಿ ಆಗಾಗ್ಯೆ ಇದನ್ನು

ಹೆದರಿಸುತ್ತಿತ್ತು. ರಾಮೂಗೆ ಅದರ ಮೇಲೆ ಬಿದ್ದು ಅದನ್ನು ಪರಚಿ ಬಿಡಲೇ ಅನ್ನುವಷ್ಟು ಕೋಪ ಬರುತ್ತಿತ್ತು.

ಬೆಳಗಾಯ್ತು. ಅಯ್ಯನವರು ಬಂದು ನಾಲ್ಕೇಟು ಕೊಟ್ಟರು. ಮುಂಡೇದೆ! ರಾತ್ರಿಯೆಲ್ಲಾ ಹೊಯ್ಕೊಂಡು ನಮ್ಮ ನಿದ್ದೆ ಎಲ್ಲಾ ಹಾಳು ಮಾಡಿದೆ. ನೋಡೋಣ. ಈ ದಿನವೂ ಹೀಗೆಯೇ ಕೂಗು! ನಿನಗೆ Shoot ಮಾಡಿ ಬಿಡುತ್ತೇನೆ. ಎಂದು ಹೊರಟು ಹೋದರು. ಈಗ ಹುಡುಗರ ತಂಡವೊಂದು ಬಂತು. ಕೆಲವರು ಅದನ್ನು ಕೋಲಿನಿಂದ ಚುಚ್ಚಿದರು. ಅದರ ಕಡೆ ಕಲ್ಲನ್ನು ಬೀರಿದರು. ಮತ್ತಿತರರು ಮಿಠಾಯಿಯನ್ನು ತೋರಿಸಿ, ಆಸೆ ತೋರಿ ತಿನ್ನಲಾರಂಭಿಸಿದರು. ಆತ್ಮರಕ್ಷಣೆಗಾಗಿ ಎಲ್ಲವನ್ನೂ ಮಾಡಿತು. ನಮಸ್ಕಾರ ಮಾಡಿತು. ಲಾಗ ಹಾಕಿತು. ಆದರೆ ಎಲ್ಲವೂ ವ್ಯರ್ಥ. ಅಂದು ಯಾರೂ ಅನ್ನವನ್ನೂ ಸಹಾ ಹಾಕಲಿಲ್ಲ. ಹಾಕಿದ್ದರೂ ಅದು ತಿನ್ನುವಂತಿರಲಿಲ್ಲ.

ಸಾಯಂಕಾಲದ ಹೊತ್ತಿಗೆ ದಾಸಪ್ಪ ರಾಮೂ ಇಲ್ಲಿರುವುದೆಂಬುದನ್ನು ಪತ್ತೆ ಹಚ್ಚಿ, ಬಂದನು. ಅವನನ್ನು ನೋಡಿ ರಾಮುಗೆ ಬಹಳ ಶಕ್ತಿ ಸಂತೋಷಗಳು ಬಂದಂತಾಯ್ತು. ದಾಸಪ್ಪ ಅದನ್ನು ಅಪ್ಪಿಕೊಂಡನು. ಪ್ರೀತಿಯ ಕಣ್ಣೀರು ಸುರಿಸಿದನು. ದುಗ್ಗಯ್ಯನವರ ಬಳಿ ಹೋಗಿ— "ಹುಜೂರ್– ತಿಳಿಯದೆ ಮನುಷ್ಯರೂ ತಪ್ಪು ಮಾಡುತ್ತಾರೆ. ಅಂದಮೇಲೆ ಇದು ಪಾಪ ಮೂಕು ಪ್ರಾಣಿ. ನಿಮಗೆ ಇಷ್ಟವಿದ್ದರೆ ನನಗೆ ಶಿಕ್ಷೆಕೊಡಿ. ಇದನ್ನು ಬಿಟ್ಟುಕೊಡಿ. ನನ್ನ ಹೊಟ್ಟೆ ತುಂಬುತ್ತಿದುದ್ದು ಇದರಿಂದ! ಇದು ಹೊರತು ನಮಗೆ ದಿಕ್ಕೇ ಇಲ್ಲ. ಇದನ್ನು ನಮ್ಮ ಮಕ್ಕಳಂತೆ ಸಾಕಿದ್ದೇವೆ. ಇದು ಕಾಣದೆ ಹೋದ ಲಾಗಾಯ್ತು ನನ್ನ ಹೆಂಡತಿ ಹೊಟ್ಟೆಗೆ ಹಿಟ್ಟೂ ತೆಗೆದುಕೊಂಡಿಲ್ಲ. ಬುದ್ಧಿ, ಇದನ್ನು ಬಿಟ್ಟು ಬಿಡಿ. ಇದರಿಂದ ಬಹಳ ಪುಣ್ಯ ಬರುತ್ತೆ ನಿಮಗೆ. ಬಡವನ ಮನೆ ಉದ್ಧಾರಮಾಡಿದಂತಾಗುತ್ತೆ!" ಎಂದು ಅಂಗಲಾಚಿದ. ಆದರೆ ಅಯ್ಯನವರಿಗೆ ದಯಾಪಾರವಾಗಿರಲಿಲ್ಲ. "ಏ ಸುಮ್ಮನೆ ಏಕೋ ಬೊಗಳುತ್ತೀಯಾ! ಹೋಗಿ ನೋಡು ಎಷ್ಟು ಹಣ್ಣುಗಳನ್ನು ಹಾಳು ಮಾಡಿದೆ? ಇದನ್ನು ನಿನಗೆ ಕೊಟ್ಟೇ ಬಿಡಬೇಕು ಅಂತ ಇದ್ದರೆ ಹತ್ತು ರೂಪಾಯಿಗಳ

ದಂಡ ತೆಗೆದುಕೊಂಡು ಬಾ, ಇಲ್ಲದೇ ಇದ್ದರೆ ನಿನ್ನ ದಾರಿ ನೀನು ಹಿಡಿದು ಹೋಗು? ಹೀಗೇ ಬಿದ್ದು ಸತ್ತುಹೋಗಲಿ. ಇಲ್ಲವೇ ಯಾರಾದರೂ ಬಂದರೆ ಕ್ರಯಕ್ಕೆ ಕೊಟ್ಟುಬಿಡುತ್ತೇನೆ".

ದಾಸಪ್ಪ ನಿರಾಶೆಯಿಂದ ಮನೆಗೆ ಬಂದನು. ಹತ್ತು ರೂಪಾಯಿಗಳನ್ನು ಎಲ್ಲಿಂದ ತರಬೇಕು! ಹೋಗಿ ಎಲ್ಲವನ್ನೂ ರಾಮಿಗೆ ಹೇಳಿದನು. ರಾಮಿ—ನಿಮ್ಮಿಂದ ಏನೂ ಸಾಗಾಕಿಲ್ಲ. ನೋಡಿ ನಾನ್ ಹೋಗ್. ಬಿಟ್ ಬರ್ತಿನ್ನಿ ಎಂದು ಅಯ್ಯನವರ ಮನೆ ಕಡೆ ಹೊರಟಳು. ಜೊತೆಗೆ ರಾಮುನ ಸಾಮಾನುಗಳನ್ನೆಲ್ಲಾ ತೆಗೆದುಕೊಂಡಳು. "ಸ್ವಾಮೀ, ನಿಮ್ಮಲ್ಲಿ ಭಿಕ್ಷೆ ಬೇಡಲು ಬಂದಿರುತ್ತೇನೆ. ದಯವಿಟ್ಟು ಈ ಕೋತಿಯನ್ನು ನಮಗೆ ಕೊಟ್ಟುಬಿಡಿ".

"ದಾನ ಕೊಡುವುದು ಪಾಪವೆಂದು ತಿಳಿಯುತ್ತೇವೆ."

"ನಾವು ದೇಶ ದೇಶಗಳನ್ನೆಲ್ಲಾ ಸುತ್ತುತ್ತೇವೆ. ನಿಮ್ಮ ಯಶಸ್ಸನ್ನು ಸಾರುತ್ತೇವೆ."

"ನಮಗೆ ಯಶಸ್ಸು ಬೇಕಾಗಿಲ್ಲ. ನಿಮ್ಮ ಸಾರುವಿಕೆ ಬೇಕಾಗಿಲ್ಲ."

"ದೇವರು ನಿಮಗೆ ಒಳ್ಳೆಯದು ಮಾಡುತ್ತಾನೆ"

"ಅದೆಲ್ಲಾ ನಮಗೆ ಗೊತ್ತಿಲ್ಲ"

"ಸ್ವಾಮಿ, ಇದೊಂದು ಬಾರಿ ಕ್ಷಮಿಸಿಬಿಡಿರಿ."

"ನಮಗೆ ದಂಡಹೊರತು ಕ್ಷಮಾಪಣೆಯ ವಿಚಾರವೇ ತಿಳಿಯದು."

"ಸ್ವಾಮಿ ತಾವು ದೊಡ್ಡವರು. ದೊಡ್ಡವರ ಧರ್ಮ ನ್ಯಾಯವಾಗಿ ನಡೆಯುವುದು. ಹಣ್ಣುಗಳು ಹಾಳಾದುವೆಂದು ಎರಡು ಪ್ರಾಣಿಗಳ ಬಲಿಯನ್ನು ತೆಗೆದುಕೊಳ್ಳಬೇಡಿ. ನ್ಯಾಯಬದ್ಧತೆಯೇ ದೊಡ್ಡವರ ಭೂಷಣ."

"ದೊಡ್ಡಸ್ತಿಗೆ, ಕ್ಷಮೆ ಮತ್ತು ನ್ಯಾಯದಲ್ಲಿಲ್ಲ. ಅಧಿಕಾರದಲ್ಲಿದೆ!" ರಾಮಿಯ ಯುಕ್ತಿಯೊಂದೂ ಆ ಅಹಂಕಾರಮೂರ್ತಿಯ ಮುಂದೆ ಫಲಿಸಲಿಲ್ಲ. ನಿರಾಶಳಾಗಿ ಕೊನೆಗೆ—"ಸ್ವಾಮಿ, ಈ ಸಾಮಾನುಗಳು ಇದಕ್ಕೆ ಸೇರಿದವು. ಇವುಗಳನ್ನು ಇಲ್ಲಿಯೇ ಬಿಟ್ಟುಹೋಗುವುದಕ್ಕಾದರೂ ಅಪ್ಪಣೆ ಕೊಡಿ. ಇವುಗಳನ್ನು ಕಂಡರೆ ಇದಕ್ಕೆ ಬಹಳ ಇಷ್ಟ."

"ಈ ಕೊಳೆಯ ಹರಕು ಚಿಂದಿಗಳನ್ನು ಇಟ್ಟುಕೊಳ್ಳಲು ಸ್ಥಳವಿಲ್ಲ." ರಾಮಿ, ದಾಸಪ್ಪ ಇಬ್ಬರೂ ಪೂರ್ಣ ಹತಾಶರಾಗಿ ಮನೆಯ ಕಡೆ ನಡೆದರು.

## III

ತಂಟೆ ಮಾಡದೆ ಕುಳಿತಿದ್ದ ರಾಮುವನ್ನು ರೇಗಿಸಲು ಟಾಮಿ ಬಂತು. ರಾಮು ತಡೆಯದಾಯಿತು. ಬೇಗ ಅದರ ಕಡೆ ನೆಗೆದು ಅದರ ಎರಡು ಕಿವಿಗಳನ್ನೂ ಹಿಡಿದುಕೊಂಡು ಎಳೆಯತೊಡಗಿತು. ನಾಯಿ ಕಿರುಚಿಕೊಂಡಿತು. ದುಗ್ಗಯ್ಯನವರು ಹೊರಗಡೆ ಬಂದರು. ಕೈಯಲ್ಲಿದ್ದ ವಾಕಿಂಗ್ ಸ್ಟಿಕ್ಕಿನಿಂದ ನಾಲ್ಕು ಚೆನ್ನಾಗಿ ಸೆಳೆದರು ಪಾಪ! "ಈ ಹಾಳಾದ್ದಕ್ಕೆ ಒಂದ್ಮೂರ್ ದಿನ ಏನೂ ಕೊಡಬೇಡ್ರೋ" ಎಂದು ತಮ್ಮ ಸೇವಕರಿಗೆ ಆಜ್ಞಾಪಿಸಿ ಒಳಕ್ಕೆ ಹೊರಟು ಹೋದರು.

ಪಾಪ, ರಾಮು ಹಣೆಯಲ್ಲಿ ಏನು ಬರೆದಿತ್ತೋ! ಆ ದಿವಸ ಸಾಯಂಕಾಲ ಒಂದು ಸರ್ಕಸ್ ಕಂಪನಿ ಆ ಊರಿಗೆ ಬಂದಿತು. ಆ ಸರ್ಕಸ್ಸಿನ ಮ್ಯಾನೇಜರು ಆಟವಾಡಲು ಅನುಮತಿಯನ್ನು ಕೇಳಲು ಪೋಲೀಸ್ ಇನ್‌ಸ್ಪೆಕ್ಟರ್ ದುಗ್ಗಯ್ಯನ ಮನೆಗೆ ಬಂದನು. ರಾಮು ಸಪ್ಪೆ ಮೋರೆ ಹಾಕಿಕೊಂಡು ಬಾಗಿಲಲ್ಲಿ ಕುಳಿತಿತ್ತು. ಅದನ್ನು ತನ್ನ ಹತ್ತಿರ ಕರೆದನು. ಅದು ಬಂದು ಅವನಿಗೆ ಸಲಾಂ ಮಾಡಿತು. ಇದರಿಂದ ಅದು ಸಾಕಿದ ಕೋತಿ ಎಂದು ತಿಳಿಯಿತು ಅವನಿಗೆ. ಸರಿ. ಇನ್‌ಸ್ಪೆಕ್ಟರವರ ಹತ್ತಿರ ತನಗೆ ಕೊಡಬೇಕೆಂದೂ, ಅದಕ್ಕಾಗುವ ಕ್ರಯವನ್ನು ಕೊಡುವುದಾಗಿಯೂ ಕೇಳಿಕೊಂಡನು. "ರೋಗಿ ಬಯಸಿದ್ದೂ ಹಾಲೂ ಅನ್ನ. ವೈದ್ಯ ಹೇಳಿದ್ದೂ ಹಾಲೂ ಅನ್ನ" ಅಂದ ಹಾಗೆ ಹಾಳಾದ್ದು ತೊಲಗಿದರೆ ಸಾಕಪ್ಪಾ ಅಂತ ಯೋಚಿಸುತ್ತಿದ್ದ ದುಗ್ಗಯ್ಯನವರು ಅದನ್ನು ನಿಶ್ಚಿಂತೆಯಿಂದ ಮಾರಿಬಿಟ್ಟರು. ರಾಮುಗೆ ಈ ನರಕದಿಂದ ಪಾರಾದೆನಲ್ಲಾ ಎನಿಸಿತು. ಆದರೆ ತಾನು ಹೋದೆಡೆ ಇನ್ನೂ ನರಕ ಎನ್ನುವುದು ಸ್ವಲ್ಪದರಲ್ಲೇ ಗೊತ್ತಾಯ್ತು. ಕಂಪನಿ ಮ್ಯಾನೇಜರ್ ಅದನ್ನು ಕೋತಿಗಳನ್ನು ನೋಡಿಕೊಳ್ಳುವವನ ವಶಕ್ಕೊಪ್ಪಿಸಿದನು. ಸ್ವಭಾವತಃ ಆ ಪ್ರಾಣಿ ಕ್ರೂರಿ

ಮತ್ತು ಕೆಟ್ಟವನಾಗಿದ್ದನು. ಅವನ ಕೈಕೆಳಗೆ ಇನ್ನೂ ಅನೇಕ ಕೋತಿಗಳು ಯಾತನೆಯನ್ನು ಅನುಭವಿಸುತ್ತಿದ್ದವು. ರಾಮುಗೆ ಕೊಟ್ಟ ಆಹಾರವನ್ನು ಅವೇ ಕಚ್ಚಾಡಿ ತಿಂದು ಬಿಡುತ್ತಿದ್ದವು. ಆ ಕೋತಿಗಳು ಇದನ್ನು ಸಹರ್ಷ ಸ್ವಾಗತಿಸಲಿಲ್ಲ. ಅವುಗಳನ್ನು ಬೇರೆ ಬೇರೆಯಾಗಿಡದೆ ಒಟ್ಟಿಗೆ ಇಟ್ಟುದೇ ಇದಕ್ಕೆ ಕಾರಣ. ರಾಮು ಈಗ ಹೊಸ ವಿದ್ಯೆಯನ್ನು ಕಲಿಯ ಬೇಕಾಯ್ತು. ಸೈಕಲ್ಲನ್ನು ತುಳಿಯುವುದು, ಓಡುತ್ತಿರುವ ಕುದುರೆಯ ಮೇಲೆ ಹಾರಿ ನಿಂತುಕೊಳ್ಳುವುದು, ತಂತಿಯ ಮೇಲೆ ನಡೆಯುವುದು, ಇತ್ಯಾದಿ ಕಷ್ಟ ಸಾಧ್ಯವಾದವುಗಳನ್ನೂ ಕಲಿಯಬೇಕಾಯ್ತು. ಈ ಕುಶಲ ವಿದ್ಯೆಗಳನ್ನು ಕಲಿಯಲು ರಾಮು ಬಹಳ ಪೆಟ್ಟುಗಳನ್ನು ತಿನ್ನಬೇಕಾಗಿ ಬಂತು. ಇದೆಲ್ಲಕ್ಕಿಂತ ಅದನ್ನು ಒಂದನ್ನೇ ಯಾರೂ ನೋಡದ ಪೆಟ್ಟಿಗೆಯಲ್ಲಿ ಕೂಡಿ ಹಾಕುತ್ತಿದ್ದರು. ಬಹಳ ಅಶಕ್ಯವಾಯಿತು ಅದಕ್ಕೆ ದಾಸಪ್ಪನು ಆಟಗಳನ್ನು ಆಡಿಸುತ್ತಿದ್ದನು. ಆದರೆ ಆ ಆಟಕ್ಕೂ ಈ ಆಟಕ್ಕೂ ಅಜಗಜಾಂತರ. ಅವನ ಪ್ರೀತಿಯ ಕರೆ ಎಲ್ಲಿ! ಇಲ್ಲಿಯ ಚಾಟಿ ಹೊಡೆತವೆಲ್ಲಿ! ಅಲ್ಲಿಯ ಸ್ವಾತಂತ್ರವೆಲ್ಲಿ, ಇಲ್ಲಿಯ ಬಂಧನವೆಲ್ಲಿ! ದಾಸಪ್ಪನ ಬಳಿಗೆ ಹಿಂದಿರುಗಿ ಹೋಗಲು ಅದು ಯಾವಾಗಲೂ ಸಮಯವನ್ನು ನಿರೀಕ್ಷಿಸುತ್ತಿತ್ತು. ಯಾವಾಗ ದಾಸಪ್ಪನನ್ನು ಕಂಡೇನೋ ಎನ್ನುತ್ತ ಮಿಡುಕುತ್ತಿತ್ತು. ಆದರೆ ಮಾಲೀಕನು ಬಹಳ ಹುಷಾರಿನವನಿದ್ದನು. ಹೊರಗಡೆಯ ಗಾಳಿ ಸೋಂಕುವುದು ಕಷ್ಟವಿತ್ತೆಂದ ಮೇಲೆ ತಪ್ಪಿಸಿಕೊಳ್ಳುವ ವಿಷಯ ಹಾಗಿರಲಿ! ಆಟ ಆಡಿಸುವವರು ಹೆಚ್ಚು ಮಂದಿಯಾಗಿದ್ದರು. ಊಟ ಕೊಡುವವರು ಯಾರೂ ಇರಲಿಲ್ಲ. ದುಗ್ಗಯ್ಯನವರ ಬಂದಿಯಿಂದ ಪಾರಾಗಿ ಬಂದ ಮೇಲೆ ಅಲ್ಲಿ ಮೂರು ತಿಂಗಳು ಕಳೆದುವು. ದಿನಗಳೆದಂತೆ ರಾಮು ಬಡವಾಗ ತೊಡಗಿತು; ಚಿಂತೆ ಹತ್ತಿ ಕೊಂಡಿತು ಆದರೇನು! ತಪ್ಪಿಸಿಕೊಳ್ಳಲು ಯಾವ ಮಾರ್ಗವೂ ಇರಲಿಲ್ಲ! ಇಷ್ಟವಿರಲಿ, ಇಲ್ಲದಿರಲಿ ಕೆಲಸವನ್ನೇನೋ ಮಾಡಲೇ ಬೇಕಾಗಿತ್ತು. ಮಾಲೀಕನಿಗೆ ಹಣದಾಸೆ, ಯಾರು ಸತ್ತರೇನು! ಯಾರು ಕೆಟ್ಟರೇನು!

ಅಂದು ಚೀಣೀ ತರುಣಿಯರಿಬ್ಬರು ಉರಿಗೋಲನ್ನು ಹಾರಿಸುತ್ತಾ ತಾಂಡವವಾಡುತ್ತಿದ್ದರು, ಒಂದು ಕಡೆ! ಮಾಲೀಕನ ದುರಾದೃಷ್ಟ ದೇವತೆ

ಕಾಲ ನಿರೀಕ್ಷಣೆಯಲ್ಲಿದ್ದಳು ಇನ್ನೊಂದು ಕಡೆ! ಎರಡನೇ ತರುಣಿ ಎಸೆದ ಉರಿಗೋಲು ಮೇಲೆ ಹೋಯಿತು! ಡೇರಾದ ಬಟ್ಟೆಗೆ ತಗುಲಿತು. ಗಾಳಿ ಜೋರಾಗಿ ಬೀಸಿತು! ಡೇರಾ ಹತ್ತಿಕೊಂಡು ಉರಿಯ ತೊಡಗಿತು. ಜನರು ಹಾಹಾಕಾರ ಮಾಡಿದರು. ಪ್ರೇಕ್ಷಕರೆಲ್ಲರೂ ಹೊರಗಡೆ ಓಡಿದರು. ಕಂಪನಿಯ ಕೆಲಸಗಾರರು ಕೈಗೆ ಸಿಕ್ಕಿದ ಸಾಮಾನುಗಳನ್ನು ಹೊರಕ್ಕೆ ತೆಗೆಯಲಾರಂಭಿಸಿದರು. ಭಯಂಕರ ಕ್ರೂರ ಮೃಗಗಳು ದೊಡ್ಡದಾಗಿ ದನಿ ಮಾಡಿದುವು. ಕೋತಿಗಳ ಬೋನುಗಳು ತೆರೆಯಲ್ಪಟ್ಟಿದ್ದುವು. ಎಲ್ಲಾ ಚಾಲಕರೂ ಘಟನಾ ಸ್ಥಳಕ್ಕೆ ಓಡಿ ಬಂದರು. ಎಷ್ಟೋ ಕೋತಿಗಳು ಓಡಿ ಹೋದವು ಮುಂದೆ ಓಡಿ ಹೋದುದು ನಮ್ಮ ರಾಮು. ಡೇರಾ ಉಳಿಯಿತೋ, ಉರಿಯಿತೋ, ಎಂದೂ ಸಹಾ ನೋಡಲಿಲ್ಲ.

ಒಂದೇ ಉಸಿರಿನಲ್ಲಿ, ಒಂದೇ ಓಟದಲ್ಲಿ ದಾಸಪ್ಪನ ಮುರಕು ಮನೆಯ ಬಾಗಿಲಿಗೆ ಬಂದಿತು. ಆದರೆ ಬೀಗ ಹಾಕಿತ್ತು. ಹತ್ತಿರದಲ್ಲಿದ್ದ ಚಪ್ಪರವನ್ನೂ ಹತ್ತಿ ಮನೆಯ ಒಳಗಡೆ ನೋಡಿತು. ಯಾರೂ ಅಲ್ಲಿ ವಾಸಿಸುತ್ತಿದ್ದುದು ತೋರಲಿಲ್ಲ. ತಾನು ಕುತುಕೊಳ್ಳುತ್ತಿದ್ದ ಜಾಗ, ರಾಮಿ ತನಗಾಗಿ ತಟ್ಟೆಯನ್ನು ಸಾರಿಸಿ ಅಂದವಾಗಿಡುತ್ತಿದ್ದ ಜಾಗ, ಹುಲ್ಲು ಬೆಳೆದು ಮುಚ್ಚಿ ಹೋಗಿತ್ತು. ಅದು ಆಟವಾಡುತ್ತಿದ್ದ ಕೋಲು ಗೆದ್ದಲು ಹಿಡಿದು ಬಿದ್ದಿತ್ತು. ಆ ಗಲ್ಲಿಯವರು ಅದನ್ನು ಗುರ್ತಿಸಿದರು. "ರಾಮು ಬಂತು, ರಾಮು ಬಂತು!"–ಆದರೆ ಹಿಂದಿನ ಆನಂದ ಅದಕ್ಕಾಗಲಿಲ್ಲ.

ಪ್ರತಿದಿನವೂ ಸಾಯಂಕಾಲ ಅದೇ ಮೋಟು ಕಟ್ಟೆಯ ಮೇಲೆ ಬಂದು ಕುಳಿತುಕೊಳ್ಳುತ್ತಿತ್ತು, ಮಲಗುತ್ತಿತ್ತು, ದಿನವೆಲ್ಲಾ ಆ ಗಲ್ಲಿಯಲ್ಲಿ ಸುತ್ತಿ ಬರುತ್ತಿತ್ತು. ಆದರೆ ಯಾರೂ ಏನನ್ನೂ ಕೊಡುತ್ತಿರಲಿಲ್ಲ. ಅದು ಸಹಾ ಯಾರ ಗೊಡವೆಗೂ ಹೋಗುತ್ತಿರಲಿಲ್ಲ. ತನ್ನ ಮಾಲೀಕ ಬಂದೇ ಬರುತ್ತಾನೆಂದು ನಂಬಿಕೊಂಡೇ ಇತ್ತು. ರಾತ್ರಿಯೆಲ್ಲಾ ಏನೇನೋ ಕನವರಿಸುತಿತ್ತು. ಅದರ ಚಿಂತಾಸ್ಥಿತಿಯನ್ನು ನೋಡಿ ಯಾರೂ ಮರುಗದೆ ಇರುತ್ತಿರಲಿಲ್ಲ.

ಎಷ್ಟೋ ತಿಂಗಳುಗಳು ಹೀಗೆ ಕಳೆದವು. ರಾಮು ಎಂದಿನಂತೆ ಮೋಟುಕಟ್ಟೆಯ ಮೇಲೆ ಸೊರಗಿ ಹೋದ ಮುಖದಿಂದ ಕೂತಿತ್ತು. ಹುಡುಗರ ಕೂಗಾಟ ಕೇಳಬಂತು. ಅತ್ತ ಅದರ ದೃಷ್ಟಿ ಹೋಯ್ತು. ಅವಳೊಬ್ಬ ಹೆಂಗಸು ಹರಿದ ಚಿಂದಿಯನ್ನಷ್ಟು ಸೊಂಟಕ್ಕೆ ಸುತ್ತಿಕೊಂಡಿದ್ದಾಳೆ. ತಲೆ ಕೂದಲುಗಳು ಹರಡಿವೆ, ಹಣ್ಣಾಗಿವೆ. ಕೈಲೊಂದು ಊರುಗೋಲು, ಅವಳಸುತ್ತ ಹುಡುಗರು ಸುತ್ತಿಕೊಂಡು ಕಲ್ಲು ಬೀರುತ್ತಾ "ಹುಚ್ಮುದ್ಕಿ, ಹುಚ್ಮುದ್ಕಿ" ಎಂದು ಕಿರಚುತ್ತಾ ತಪ್ಪಾಳೆ ತಟ್ಟುತ್ತಿದ್ದಾರೆ. —ನಾನು ಹುಚ್ಚಿಯಲ್ಲಪ್ಪಾ, ಹುಚ್ಚೀ ಎಂದು ಕೂಗುತ್ತಿದ್ದೀರಿ—ಕೊನೆಗೆ ಅಲ್ಲಿಯೇ ಒಂದೆಡೆ ಕುಳಿತುಕೊಂಡಳು. —ನನ್ನನ್ನು ಏತಕ್ಕಾಗಿ ಹುಚ್ಚಿ ಎಂದು ಕರೆಯುವಿರಿ ಹೇಳಿ—ಅವಳಿಗೆ ಹುಡುಗರ ಮೇಲೆ ಸ್ವಲ್ಪವೂ ಕೋಪವುಂಟಾದಂತೆ ಕಾಣಲಿಲ್ಲ. ಅವಳು ನಗುತ್ತಲೂ ಇರಲಿಲ್ಲ, ಅಳುತ್ತಲೂ ಇರಲಿಲ್ಲ. ಕಲ್ಲು ಹೊಡೆದರೂ ಸುಮ್ಮನೇ ಇರುತ್ತಿದ್ದಳು. ಅವರಲ್ಲಿ ಒಬ್ಬ ಹುಡುಗನು—ನೀನು ಬಟ್ಟೆಯನ್ನೇಕೆ ಉಟ್ಟುಕೊಂಡಿಲ್ಲ. ಹುಚ್ಚಿಯಲ್ಲದೆ ಮತ್ತೇನು?

"ಬಟ್ಟೆಗಳನ್ನು ಚಳಿಗಾಲದಲ್ಲಿ ಚಳಿ ಎಂದು ಹಾಕಿಕೊಳ್ಳುತ್ತಾರೆ. ಈಗ ಬೇಸಿಗೆ ಸೆಕೆಯಲ್ಲವೆ!"

"ನಿನಗೆ ನಾಚಿಕೆಯಾಗುವುದಿಲ್ಲವೇ?"

"ನಾಚಿಕೆ ಏಕೆ ಮಗೂ! ಸಾಧು ಸಂತರು ಹೀಗೆಯೇ ಇರುವುದಿಲ್ಲವೆ? ಅವರಿಗೆ ಕಲ್ಲುಗಳಿಂದ ಹೊಡೆಯುವುದಿಲ್ಲ!"

"ಅವರೆಲ್ಲಾ ಗಂಡಸರು,"

"ಹೆಂಗಸರಿಗೆ ಮಾತ್ರವೇ ನಾಚಿಕೆ ಇರುವುದೇ! ಗಂಡಸರಿಗೆ ನಾಚಿಕೆಯಿಲ್ಲ ಹಾಗಾದರೆ."

"ನಿನಗೆ ಏನನ್ನು ಕೊಟ್ಟರೂ ತಿಂದು ಬಿಡುತ್ತೀಯೆ. ನೀನು ಹುಚ್ಚಿಯಲ್ಲದೆ ಮತ್ತೇನು?"

"ಇದರಲ್ಲಿ ಹುಚ್ಚೆಲ್ಲಿ ಬಂತಪ್ಪಾ! ಹಸಿವೆ ಆಗುತ್ತೆ. ಹೊಟ್ಟೆ ತುಂಬಿಕೊಳ್ಳುತ್ತೇನೆ."

"ನೀನು ವಿಚಾರ ಮಾಡುವುದೇ ಇಲ್ಲ. ಯಾರು ಕೊಟ್ಟರೂ ತಿನ್ನುವಿಯಲ್ಲಾ. ನಿನಗೆ ಹೇಸಿಗೆಯಾಗುವುದಿಲ್ಲವೇ?"

"ಹೇಸಿಗೆ ಎಂದರೇನಪ್ಪಾ ನನಗೆ ಗೊತ್ತಿಲ್ಲ."

"ಯಾರಾದರೂ ದುಡ್ಡು ಕೊಟ್ಟರೆ ಏಕೆ ತೆಗೆದು ಕೊಳ್ಳುವುದಿಲ್ಲ? ಬಟ್ಟೆ ಕೊಟ್ಟರೂ ಹಾಗೇ ಬಿಟ್ಟು ಹೊರಟು ಹೋಗುತ್ತೀಯೆ. ಹುಚ್ಚಿಯಲ್ಲದೆ ಮತ್ತಿನ್ನೇನು!"

"ಹಣ, ಬಟ್ಟೆ ತೆಗೆದುಕೊಂಡು ಏನು ಮಾಡಲಪ್ಪಾ?"

"ಜನರು ಏನು ಮಾಡುತ್ತಾರೆ! ಹಣ ಬಟ್ಟೆಗಳ ಆಸೆ ಎಲ್ಲರಿಗೂ ಇದ್ದೇ ಇರುತ್ತೆ."

"ಆಸೆ ಅಂತ ಯಾವುದಕ್ಕೆ ಹೇಳುತ್ತಾರಪ್ಪಾ?"

"ಇದಕ್ಕೇ ನಿನ್ನನ್ನು ಹುಚ್ಚು ಮುದುಕಿ ಎನ್ನುವುದು. ನಿನಗೆ ಹೇಸಿಗೆ ಇಲ್ಲ, ನಾಚಿಕೆ ಇಲ್ಲ, ಮರ್ಯಾದೆ ಇಲ್ಲ. ಇಂತವರಿಗೇ ಮತ್ತೆ ಹುಚ್ಚರೆಂದೆನ್ನುವುದು."

"ಹಾಗಾದರೆ ನನ್ನನ್ನು ಹುಚ್ಚಿಯೆಂದೇ ಕರೆಯಿರಿ."

"ನಿನಗೆ ಸಿಟ್ಟು ಏಕೆ ಬರುವುದೇ ಇಲ್ಲ."

"ನನಗೇನು ಗೊತ್ತು? ನನಗೇನೋ ಸಿಟ್ಟು ಬರುವುದೇ ಇಲ್ಲಪ್ಪ. ಹಾಗಾದರೆ ಸಿಟ್ಟು ಎಲ್ಲರಿಗೂ ಬರುತ್ತವೆ ಅನ್ನೊ. ನನಗೆ ತಿಳಿಯದು."

"ಹುಚ್ಚಿ, ಹುಚ್ಚಿ" ಎಂದು ಹುಡುಗರು ಕೂಗಿಕೊಂಡು ಹೊರಟು ಹೋದರು. ಆದರೆ ಅವರ ಮೇಲೆ ಕೊಂಚವಾದರೂ ಕೋಪಿಸಿ ಕೊಳ್ಳಲಿಲ್ಲ. ಅವಳು ಹತ್ತಿರ ಬಂದೊಡನೆಯೇ ರಾಮು ಅವಳನ್ನು ಗುರ್ತಿಸಿತು. "ಇವಳೇ ನನ್ನ ರಾಮಿ". ಅದು ಓಡಿ ಬಂದು ಅವಳ ಕಾಲುಗಳ ಮೇಲೆ ಬಿದ್ದಿತು. ಮುದುಕಿ ಆಶ್ಚರ್ಯದಿಂದ ನೋಡಿದಳು. ತನ್ನ ರಾಮುವಾಗಿತ್ತು. ಅದನ್ನು ಪ್ರೀತಿಯಿಂದ ಎತ್ತಿಕೊಂಡು ಅಪ್ಪಿಕೊಂಡಳು.

## IV

ರಾಮುನನ್ನು ಅಪ್ಪಿಕೊಂಡ ಕೂಡಲೇ ತಾನು ನಗ್ನವಾಗಿರುವೆನೆಂದು ರಾಮಿಗೆ ಅರಿವಾಯ್ತು. ನಾಚಿಕೆಪಟ್ಟುಕೊಂಡು ಒಬ್ಬ ಹುಡುಗ

ನಿಗೆ—"ಮಗೂ, ನನಗೆ ಏನಾದರೂ ಉಟ್ಟುಕೊಳ್ಳಲು ಬಟ್ಟೆ ತಂದು ಕೊಡುವೆಯಾ"

"ನಿನಗೆ ನಾಚಿಕೆಯೇ ಇಲ್ಲವೆಂದೆ!"

"ಇಲ್ಲಪ್ಪಾ, ಈಗೀಗ ಆಗುತ್ತಿದೆ. ನನಗೇನಾಗಿತ್ತೋ ನನಗೇ ತಿಳಿಯದು."

ಹುಡುಗರು ಹುಚ್ಚಿ ಎಂದು ಕೂಗಿಕೊಂಡು ಓಡಿಹೋದರು. ಹುಡುಗರ ಕೂಗನ್ನು ಕೇಳಿ ಸಿಟ್ಟು ತಡೆಯಲಾರದೆ ಅಟ್ಟಿಸಿಕೊಂಡು ಹೋದಳು ರಾಮಿ.

"ನಿನಗೆ ಸಿಟ್ಟು ಬರುತ್ತಲೇ ಇರಲಿಲ್ಲ. ಈಗೇಕೆ ಹೀಗೆ?"

"ನನಗೇನು ಗೊತ್ತು ಮಗು! ಈಗ ಯಾರಾದರೂ ಹುಚ್ಚಿ ಎಂದು ಕೂಗಿದರೆ ನಮ್ಮ ರಾಮುವನ್ನು ಛೂ ಬಿಟ್ಟುಬಿಡುತ್ತೇನೆ."

ಹರಿದ ತುಂಡೊಂದನ್ನು ಒಬ್ಬ ಹುಡುಗ ತಂದುಕೊಟ್ಟನು. ರಾಮಿ ತುಂಡನ್ನುಟ್ಟುಕೊಂಡಳು, ಕೆದರಿದ ಕೂದಲನ್ನು ಸರಿಪಡಿಸಿಕೊಂಡಳು. ನಗುವಿನ ಲಹರಿಯಿಂದ ತುಂಬಿದ ಅವಳ ಮುಖಮಂಡಲವನ್ನು ಚಿಂತಾಗ್ನಿ ಕದಡಿತು. ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ಅಳುತ್ತಾ ರಾಮುಗೆ "ಮಗೂ, ನೀನೆಲ್ಲಿಗಪ್ಪಾ ಹೋಗಿದ್ದೆ. ಇಷ್ಟು ದಿನಗಳ ವರೆಗೆ ನಮ್ಮ ನೆನಪೇ ಆಗಲಿಲ್ಲವೆ! ನಿನ್ನನ್ನು ಸಾಕಿ ಆಡಿಸುತ್ತಿದ್ದ ಪ್ರೀತಿಯ ಮಾಲಿಕರು ನಿನ್ನ ವಿಯೋಗವನ್ನು ಸಹಿಸಲಾರದೆ ಗತಿಸಿದರು. ನಾನು ಭಿಕ್ಷೆ ಬೇಡಿ ಹೊಟ್ಟೆ ಹೊರೆಯಬೇಕಾಯಿತು. ನೀನಿದ್ದೆ-ಆಗ ಮನೆ, ಮಠ, ಊಟ, ಆಟ ಎಲ್ಲವೂ ಬೇಕಾಗಿತ್ತು ನನಗೆ. ನೀನು ಯಾವಾಗ ಹೊರಟು ಹೋದೆಯೋ ನನ್ನ ಸಂತೋಷವೆಲ್ಲವೂ ನಿನ್ನನ್ನೇ ಹಿಂಬಾಲಿಸಿತು. ಹಸಿವೆಯನ್ನು ತಡೆಯುತ್ತಿದ್ದೆ. ನನಗೆ ಯಾವುದರ ಚಿಂತೆಯೂ ಇರಲಿಲ್ಲ. ನಿನ್ನ ಮಾಲೀಕರು ಸತ್ತುಹೋದರು. ಆಗ ನನ್ನ ಕಣ್ಣಿನಿಂದ ಒಂದು ತೊಟ್ಟು ನೀರಾದರೂ ಬೀಳಲಿಲ್ಲ. ಮುರಕು ಮಂಚದ ಮೇಲೆ ಮಲಗಿ ಅವರು ನರಳುತ್ತಿದ್ದರು. ನಾನು ಅವರ ಹತ್ತಿರ ಸಹಾ ಸುಳಿಯುತ್ತಿರಲಿಲ್ಲ. ಅಷ್ಟು ಕಠಿಣ ಮನಸ್ಸಾಗಿತ್ತು. ನನಗೇನು ಸಂಬಂಧ ಎಂದು ಯೋಚಿಸುತ್ತಿದ್ದೆ. ಈಗ ಅಂದಿನ ಆ

ಎಲ್ಲಾ ವಿಷಯಗಳನ್ನೂ ಜ್ಞಾಪಿಸಿಕೊಂಡರೆ, ನಾನು ನಿಜವಾಗಿಯೂ ಹುಚ್ಚಿಯಾಗಿದ್ದೆ, ಆದ್ದರಿಂದಲೇ ಹುಡುಗರು ನನ್ನನ್ನು ಹುಚ್ಚಿ ಎಂದು ಕರೆಯುತ್ತಿದ್ದರು ಎನಿಸುತ್ತಿದೆ.

ರಾಮಿ ರಾಮುವನ್ನು ಕರೆದುಕೊಂಡು ಊರ ಹೊರಗೆ ಒಂದು ಹಾಳು ತೋಟಕ್ಕೆ ಬಂದಳು. ಅಲ್ಲೇ ಒಂದು ಮರದ ಕೆಳಗೆ ಅವಳು ವಾಸಿಸುತ್ತಿದ್ದುದು. ಮನುಷ್ಯವಾಸದ ಜಾಗದಲ್ಲಿರ ಬೇಕಾದ ಒಂದು ಚಿಹ್ನೆಯೂ ಅಲ್ಲಿ ಇರಲಿಲ್ಲ.

ರಾಮು ರಾಮಿಯೊಂದಿಗೇ ಇರತೊಡಗಿತು. ಪ್ರತಿದಿನ ಬೆಳಿಗ್ಗೆ ಎದ್ದು ಪೇಟೆಯಲ್ಲಿ ಹೋಗಿ ತಾನೇ ಆಟಗಳನ್ನಾಡಿ ಬಂದ ಬಿಕ್ಷವನ್ನು ಮುದಿ ರಾಮಿಗೆ ತಂದುಕೊಡುತ್ತದೆ. ನಿಜವಾದ ಮಗನೇ ಆಗಿದ್ದರೂ ಈ ತರಹ ಮಾತೃ ಸೇವೆಯನ್ನು ಮಾಡುತ್ತಿದ್ದನೋ ಇಲ್ಲವೋ!

ರಾಮು ರಾಮಿಯಲ್ಲಿಟ್ಟಿದ್ದ ಅತುಳ ಪ್ರೇಮವನ್ನು ನೋಡಿ ಜನರು ಅಚ್ಚರಿಗೊಳ್ಳುತ್ತಾರೆ. “ರಾಮು ಸಾಮಾನ್ಯ ಕೋತಿಯಲ್ಲ. ಅದೊಂದು ದೇವತಾಂಶ” ಎಂದುಕೊಳ್ಳುವರು.



೪

# ವೀರವನಿತೆ ಬುಂದೇಲ್ ರಾಣಿ

೧

ಎರಡು ಶತಮಾನಗಳು ಕಳೆದು ಹೋದವು. ಆದರೆ ಚಿಂತಾ ದೇವಿಯ ಹೆಸರಿನ್ನೂ ಅಳಿಸಿಲ್ಲ. ಬುಂದೇಲು ಖಂಡದ ನಿರ್ದಿಷ್ಟವಾದ ಒಂದು ಮೈದಾನದ ಸಮೀಪದಲ್ಲಿ ಸಹಸ್ರಾರು ಮಂದಿ ಸ್ತ್ರೀ ಪುರುಷರು ಚಿಂತಾದೇವಿಯನ್ನಾರಾಧಿಸಲು ನೆರೆಯುವರು. ಆ ದಿನ ಆ ನಿರ್ಜನ ಸ್ಥಾನವು ಮಧುರ ಗೀತವಾದ್ಯಗಳಿಂದ ಬೋರ್ಗರೆಯುತ್ತಿರುತ್ತದೆ. ಎಲ್ಲೆಲ್ಲೂ ಬಣ್ಣಬಣ್ಣದ ಉಡುಗೆಗಳನ್ನು ಉಟ್ಟ ತರುಣಿಯರ ಗುಂಪು ತುಂಬಿರುತ್ತದೆ. ದೇವಿಯ ಮಂದಿರವು ಒಂದು ಎತ್ತರವಾದ ದಿಣ್ಣೆಯ ಮೇಲೆ ನಿರ್ಮಿಸಲ್ಪಟ್ಟಿದೆ. ಆ ಮಂದಿರದ ಮೇಲೆ ಹಾರಾಡುತ್ತಿರುವ ರಕ್ತ ವರ್ಣಿತ ಧ್ವಜವು ಬಹು ದೂರದ ವರೆಗೂ ಕಾಣುತ್ತದೆ. ಮಂದಿ ರವು ಹೆಚ್ಚು ವಿಶಾಲವಾಗಿರದೆ ಇಕ್ಕಟ್ಟಾಗಿದೆ; ಮಂದಿರದ ಒಳಗಡೆ ಯಾವ ಪ್ರತಿಮೆಯೂ ಇಲ್ಲ; ಆದರೆ ಒಂದು ವೇದಿಕೆ ಮಾತ್ರ ಇದೆ. ಮಂದಿರದ ಒಳಗಡೆ ಹತ್ತಿ ಹೋಗಲು ಕಲ್ಲಿನ ಸೋಪಾನಗಳಿವೆ. ವೇದಿಕೆ ಇರು ವೆಡೆಯೇ ಚಿಂತಾದೇವಿಯು ಸಹಗಮನ ಮಾಡಿದ್ದು. ಆದರೆ ಲೋಕ ರೀತಿಯಾಗಿ ಮೃತ ಪತಿಯೊಡನೆ ಅಲ್ಲ; ಅವಳ ಪತಿಯು ಎದುರುಗಡೆ ಕೈಜೋಡಿಸಿಕೊಂಡು ನಿಂತಿದ್ದನು. ಆದರೆ ಅವಳ ದೃಷ್ಟಿ ಎಲ್ಲಾ ಉರಿ ಯುತ್ತಿರುವ ಚಿತೆಯ ಮೇಲಿತ್ತೇ ವಿನಹಾ ಅವನ ಮೇಲಿರಲಿಲ್ಲ. ಅವಳು ಪತಿಯ ಶರೀರದೊಂದಿಗಲ್ಲ; ಆತ್ಮದ ಜೊತೆಗೆ ಸಹಗಮನ ಮಾಡಿದವಳು. ಆ ಚಿತೆಯ ಮೇಲೆ ಅವಳ ಮೃತ ಪತಿಯ ಶರೀರವಿರಲಿಲ್ಲ; ಅವಳ ಮರ್ಯಾ ದೆಯು ಭಸ್ಮೀ ಭೂತವಾಗುತ್ತಲಿತ್ತು.

೨

ಯಮುನಾ ನದಿಯ ದಡದಲ್ಲಿನ ಕಾಲಟಿ ಒಂದು ಚಿಕ್ಕ ನಗರ. ಚಿಂತಾದೇವಿಯು ಆ ನಗರದ ಒಬ್ಬ ವೀರ ಬುಂದೇಲನ ಮಗಳು. ಅವಳ ತಾಯಿಯು, ಅವಳು ಚಿಕ್ಕವಳಾಗಿರುವಾಗಲೇ ಗತಿಸಿದ್ದಳು. ಅವಳ

ಪಾಲನೆ, ಪೋಷಣೆ ತಂದೆಯ ಮೇಲೆ ಬಿತ್ತು. ಆಗ ಯುದ್ಧದ ಕಾಲ, ಯೋಧರಿಗೆ ನಿದ್ದೆಗೆ ಅವಕಾಶವಿರಲಿಲ್ಲ. ಕುದುರೆಯ ಮೇಲೇ ಕುಳಿತು ಊಟವನ್ನು ಮಾಡಬೇಕಾಗಿತ್ತೇ ಹೊರತು, ಇಳಿಯಲು ಅವಕಾಶವಿರಲಿಲ್ಲ. ಹೀಗಾಗಿ ಚಿಂತಾದೇವಿಯ ಬಾಲ್ಯವು ಸಮರ ಭೂಮಿಯಲ್ಲಿಯೇ ಕಳೆಯಿತು. ಅವಳ ತಂದೆಯು ಅವಳನ್ನು ಯಾವುದಾದರೂ ಒಂದು ಗುಹೆ ಅಥವಾ ಒಂದು ಮರದ ಮೇಲೆ ಬಚ್ಚಿಟ್ಟು ಯುದ್ಧ ಮುಖನಾಗುತ್ತಿದ್ದನು. ಚಿಂತಾದೇವಿಯಾದರೋ ನಿಶ್ಚಿಂತೆಯಿಂದ ಕುಳಿತು ಅಲ್ಲೇ 'ಕೋತಿ ಕುದುರೆ'ಗಳೊಡನೆ ಯುದ್ಧದ ಆಟವನ್ನಾಡುತ್ತಿದ್ದಳು. ಹೀಗಾಗಿ ನಿರ್ಜನ ಪ್ರದೇಶದಲ್ಲಿ ಹಸಿವೆ ನೀರಡಿಕೆಗಳಿಂದ ಎಷ್ಟೋ ದಿವಸ ಕಳೆಯುತ್ತಿದ್ದಳು. ಅವಳು ಇಲಿ ಸಿಂಹಗಳ ಕಥೆಗಳನ್ನು ಕೇಳುತ್ತಿರಲಿಲ್ಲ; ವೀರರ ಆತ್ಮೋತ್ಸರ್ಗದ ಕಥೆಗಳನ್ನು ಕೇಳಿ ಕೇಳಿ ಅವಳೊಬ್ಬ ಆದರ್ಶವಾದಿನಿಯಾಗುತ್ತಾ ಬೆಳೆದಳು.

ಒಂದಾವರ್ತಿ, ಮೂರು ದಿನಗಳ ವರೆಗೆ ತಂದೆಯ ವಿಚಾರವೇ ತಿಳಿದು ಬರಲಿಲ್ಲ. ಆಗ ಯಾವುದೋ ಒಂದು ಗುಹೆಯಲ್ಲಿ ಕುಳಿತು, ಯಾರಿಂದಲೂ ಭೇದಿಸಲಸದಳವಾದ ಕೋಟೆಯೊಂದನ್ನು ನಿರ್ಮಿಸುತ್ತಿದ್ದಳು—ಮನೋರಾಜ್ಯದಲ್ಲಿ. ರಾತ್ರಿ ವೇಳೆಯಲ್ಲಿ ಅವಳು ತನ್ನ ಮನೋರಾಜ್ಯದ ಕೋಟೆಯ ಸ್ವಪ್ನವನ್ನು ಕಂಡು ಹರ್ಷಿಸುತ್ತಿದ್ದಳು. ಮೂರನೇ ದಿನ—ಸಂಧ್ಯಾ ಸಮಯ; ಕೆಲವರು, ತಂದೆಯ ಜೊತೆಯವರು ಬಂದು ಅವಳ ಮುಂದೆ ರೋದಿಸತೊಡಗಿದರು. ಚಿಂತಾದೇವಿಯು ಆಶ್ಚರ್ಯದಿಂದ ಕೇಳಿದಳು:—ತಂದೆಯವರು ಎಲ್ಲಿರುವರು? ನೀವೇಕೆ ಅಳುತ್ತಿರುವಿರಿ? ಎಂದು.

ಯಾರೂ ಉತ್ತರ ಕೊಡಲಿಲ್ಲ; ಅವರು ಇನ್ನೂ ಉಚ್ಚ ಸ್ವರದಲ್ಲಿ ರೋದಿಸತೊಡಗಿದರು. ಆಗ ಚಿಂತಾದೇವಿಯು ತನ್ನ ತಂದೆಯು ವೀರಗತಿಯನ್ನು ಹೊಂದಿದನೆಂದು ತಿಳಿದು ಕೊಂಡಳು. ಆ 13 ವರ್ಷದ ಬಾಲಿಕೆಯ ಕಂಗಳಿಂದ ಒಂದು ಹನಿಯಾದರೂ ಕಣ್ಣೀರು ಬೀಳಲಿಲ್ಲ!! ಮುಖ ಮಂಡಲವು ಮಾರ್ಪಡಲಿಲ್ಲ!! ನಿಟ್ಟುಸಿರೊಂದನ್ನಾದರೂ ಬಿಡಲಿಲ್ಲ!!! ನಗುತ್ತಾ —"ತಂದೆಯವರು ವೀರಗತಿಯನ್ನು ಹೊಂದಿದರೆ

ನೀವು ಅಳುತ್ತೀರೇಕೆ? ವೀರ ಯೋಧರಿಗೆ ಇದಕ್ಕಿಂತಲೂ ಹೆಚ್ಚೇನು ಬೇಕು? ಇದಕ್ಕಿಂತಲೂ ಹೆಚ್ಚಾಗಿ ಅವರ ವೀರತ್ವಕ್ಕೆ ಪುರಸ್ಕಾರ ಇನ್ನು ಹೇಗೆ ದೊರೆಯುವುದು? ರೋದಿಸಲು ಇದು ಸಮಯವಲ್ಲ. ಆನಂದ ಪಡಬೇಕಾದ ಕಾಲ."

ಒಬ್ಬ ಸಿಪಾಯಿಯು ಚಿಂತಿತ ಸ್ವರದಿಂದ—"ನಮಗೆ ನಿಮ್ಮ ಚಿಂತೆ. ನೀವು ಈಗ ಎಲ್ಲಿರುವಿರಿ?"

ಚಿಂತಾದೇವಿಯು ಗಂಭೀರದಿಂದ—"ನನ್ನ ಯೋಚನೆ ಬಿಡಿ. ನಾನು ನನ್ನ ತಂದೆಯ ಮಗಳು! ಅವರು ಏನನ್ನು ಆಚರಿಸಿದರೋ ಅದನ್ನೇ ನಾನೂ ಆಚರಿಸುವೆನು. ತಮ್ಮ ಮಾತೃಭೂಮಿಯನ್ನು ಶತೃಗಳ ಹಸ್ತದಿಂದ ಮುಕ್ತನನ್ನಾಗಿ ಮಾಡಲೋಸುಗ ಪ್ರಾಣಗಳನ್ನು ತ್ಯಜಿಸಿರುವರು. ನನ್ನ ಮುಂದೆಯೂ ಅದೇ ಆದರ್ಶವಿದೆ! ಹೋಗಿ! ನಮ್ಮ ಕಡೆಯವರನ್ನು ನೋಡಿಕೊಳ್ಳಿ! ಉತ್ಸಾಹ ಕೊಡಿರಿ!! ನಾನೂ ನಿಮ್ಮಷ್ಟೆ ಹೋರಾಡುವೆನು, ನನಗೆ ಒಂದು ಕುದುರೆ ಮತ್ತು ಯುದ್ಧ ಸಾಮಗ್ರಿಗಳನ್ನು ಅಣಿಮಾಡಿರಿ! ರಣರಂಗದಿಂದ ಹೇಡಿಯಂತೆ ತಿರುಗಿ ಬಂದರೆ ಅಲ್ಲಿಯೇ ನನ್ನನ್ನು ನಿರ್ಯೋಚನೆಯಿಂದ ತುಂಡರಿಸಿ! ಇದೇ ನಿಮ್ಮಲ್ಲಿ ನನ್ನ ಪ್ರಾರ್ಥನೆ. ಹೋಗಿ, ವಿಳಂಬ ಮಾಡಬೇಡಿ!

ಸಿಪಾಯಿಗಳಿಗೆ ಚಿಂತಾದೇವಿಯ ಈ ವೀರ ವಚನಗಳನ್ನು ಕೇಳಿ ಆಶ್ಚರ್ಯವಾಗಲಿಲ್ಲ; ಆದರೆ ಅವಳು ತನ್ನ ದೃಢ ಸಂಕಲ್ಪವನ್ನು ಕೊನೆಯ ವರೆಗೂ ಪಾಲಿಸುವಳೇ ಎಂಬ ಶಂಕೆಯಾಯ್ತು!

೩

ಐದು ವರ್ಷಗಳು ಕಳೆದವು. ಎಲ್ಲಾ ಪ್ರಾಂತಗಳೂ ಚಿಂತಾದೇವಿಯ ವೀರತ್ವಕ್ಕೆ ಬೆದರಿದ್ದವು. ಶತೃಗಳು ನಡುಗುತ್ತಿದ್ದರು. ಅವಳು ವಿಜಯದ ಸಜೀವ ಮೂರ್ತಿಯಂತೆ ಶತೃಗಳ ಬಾಣ ಬಂದೂಕಗಳೆದುರಿನಲ್ಲಿ ನಿಶ್ಚಲವಾಗಿ, ನಿರ್ಭಯವಾಗಿ ನಿಲ್ಲುತ್ತಿದ್ದುದನ್ನು ನೋಡಿ, ಅವಳ ಸೈನಿಕರು ಉತ್ಸಾಹಿತರಾಗಿದ್ದರು. ಸ್ತ್ರೀಯೊಬ್ಬಳೇ ಅಷ್ಟು ದಿಟ್ಟತನದಿಂದಿರುವಲ್ಲಿ ಅವರು ಹೇಗೆ ಹಿಂದೆ ಅಡಿ ಇಟ್ಟಾರು! ಅವಳು ಸೈನಿಕರಿಗೆ ಕೊಡುತ್ತಿದ್ದ ಸಂಭಾವನೆ, ಉತ್ಸಾಹಗಳಿಂದ, ರಾಜ್ಯಕ್ಕಾಗಿ ತಮ್ಮ

ಪ್ರಾಣಗಳನ್ನು ಬಲಿಕೊಡಲು ಸಿದ್ಧವಾದ ಹಲವು ಸೈನ್ಯಗಳು ಅವಳ ಕೈಕೆಗಳಗೆ ಸೇರಿದವು. ಸುಂದರಿಯರ ಸಮ್ಮುಖದಲ್ಲಿ ಯೋಧರ ವೀರತ್ವವೂ ಅಜೇಯವಾಗುತ್ತದೆ. ರಮಣಿಯರ ವಚನ-ಬಾಣ-ಗಳು ಯೋಧರಿಗೆ ಆತ್ಮ ಸಮರ್ಪಣೆಯ ಗುಪ್ತ ಸಂದೇಶವಾಗಿ ಪರಿಣಮಿಸಿ, ಹೇಡಿಯಾದವನೂ ಕೂಡ ಪುರುಷತ್ವವನ್ನು ಹೊಂದುತ್ತಾನೆ. ಚಿಂತಾ ದೇವಿಯ ಕೀರ್ತಿ ಮತ್ತು ವೀರತೆಗಳು ದೂರ ದೂರದಿಂದ ವೀರ ಯೋಧ ರನ್ನು ಆಕರ್ಷಿಸತೊಡಗಿದವು. ಪ್ರಾಣಗಳನ್ನು ತೃಣಸಮಾನವಾಗಿ ಭಾವಿಸಿರುವ ದುಂಬಿಗಳು ನಾಲ್ಕು ಕಡೆಗಳಿಂದಲೂ ಬಂದು ಬಂದು ಪುಷ್ಪದ ಮೇಲೆ ಹಾರಾಡತೊಡಗಿದವು.

ಹಾಗೆ ಬಂದ ಯೋಧರುಗಳಲ್ಲಿ ರತ್ನಸಿಂಹ ಎಂಬ ರಜಪೂತ ಯುವಕನು ಒಬ್ಬನಾಗಿದ್ದನು.

ಚಿಂತಾ ದೇವಿಯ ಸೈನಿಕರೆಲ್ಲರೂ ಆಜ್ಞಾಧಾರಕರೂ, ವೀರರೂ, ದೇಶಪ್ರೇಮ ಭರಿತರೂ ಆಗಿದ್ದರು. ಆದರೆ ರತ್ನಸಿಂಹ ಎಲ್ಲರಿಗಿಂತಲೂ ಒಂದು ಕೈ ಮೇಲಾಗಿದ್ದನು. ಚಿಂತಾದೇವಿಯ ಹೃದಯದಲ್ಲಿ ಅವನಿ ಗೊಂದು ವಿಶೇಷ ಸ್ಥಾನ ದೊರಕಿತು. ರತ್ನಸಿಂಹ ಇತರ ವೀರರಂತೆ ಅಸಭ್ಯ ವರ್ತಕನಲ್ಲ. ಇತರರು ತಮ್ಮ ಕೀರ್ತಿಗಳನ್ನು ತಾವೇ ಹೊಗಳಿ ಕೊಳ್ಳುತ್ತಿದ್ದರು; ಆತ್ಮ ಪ್ರಶಂಸೆಗೂ ಅವರು ಹೇಸುತ್ತಿರಲಿಲ್ಲ. ಅವರು ಏನು ಮಾಡಿದರೂ ಯಾರಿಗಾಗಿ! ಚಿಂತಾದೇವಿಗಾಗಿ! ಅವರ ಧ್ಯೇಯ ತಮ್ಮ ಕರ್ತವ್ಯವಾಗಿರಲಿಲ್ಲ! ಚಿಂತಾದೇವಿಯಾಗಿದ್ದಳು!! ರತ್ನಸಿಂಹ ಏನನ್ನು ಮಾಡಿದರೂ ಶಾಂತಭಾವದಿಂದಿರುತ್ತಿದ್ದನು. ಆತ್ಮ ಪ್ರಶಂಸೆ ಎಂದರೆ ಅವನಿಗೆ ಸೇರದು. ಅವನು ವಿನಯಶೀಲನಾಗಿದ್ದನು; ಸಂಕೋಚ ಭಾವಿ. ಬೇರೊಬ್ಬರ ಪ್ರೇಮದಲ್ಲಿ ವಿಲಾಸವಿತ್ತು; ಆದರೆ ರತ್ನ ಸಿಂಹನ ಪ್ರೇಮದಲ್ಲಿ ತ್ಯಾಗ ಮತ್ತು ತಪ!! ಬೇರೆಯವರು ಸುಖನಿದ್ರೆ ಮಾಡು ತ್ತಿದ್ದರು; ಆದರೆ ರತ್ನಸಿಂಹ ನಕ್ಷತ್ರಗಳ ಎಣಿಕೆಯಲ್ಲಿ ರಾತ್ರಿಯನ್ನು ಕಳೆಯುತ್ತಿದ್ದನು. ಕೆಲವರು ಚಿಂತಾದೇವಿಯು ನನ್ನವಳು ಎಂದು ಭಾವಿಸಿದ್ದರು. ರತ್ನಸಿಂಹನಿಗಾದರೋ ಹಾಗೆ ಭಾವಿಸುವವರ ಮೇಲೆ ದ್ವೇಷವಿರಲಿಲ್ಲ; ಅವನು ನಿರಾಶನಾಗಿದ್ದನು. ಇನ್ನೊಬ್ಬರು ಚಿಂತಾ

ದೇವಿಯ ಮುಂದೆ ಹಸನ್ಮುಖಿಗಳಾಗಿರುವುದನ್ನು ನೋಡಿ, ಅವಳ ವಾಕ್ಪಟುತೆಗೆ ಅಚ್ಚರಿಗೊಳ್ಳುತ್ತಿದ್ದರು. ಆದರೆ ತಕ್ಷಣದಲ್ಲಿಯೇ ನಿರಾಶಾಂಧಕಾರದಲ್ಲಿ ಎಲ್ಲವೂ ಮಾಯವಾಗುತ್ತಿತ್ತು. ಅವಳೊಡನೆ ತೆರೆದ ಹೃದಯವನ್ನಿಡಲು ಅವನಿಗೆ ನಾಚಿಕೆ. ಹೀಗಾಗಿ ಅವನು ಆಗಾಗ—ದೇವರೇ! ಆ ಧೈರ್ಯವನ್ನು ನನಗೇಕೆ ಕೊಡಲಾರೆ—ಎನ್ನುಥನು.

ಅರ್ಧರಾತ್ರಿ ಕಳೆದು ಹೋಗಿತ್ತು. ಚಿಂತಾದೇವಿಯು ತನ್ನ ಗುಡಾರದಲ್ಲಿ ವಿಶ್ರಮಿಸಿಕೊಳ್ಳುತ್ತಿದ್ದಳು. ಸೈನಿಕ ಗಣಪೂರ್ಣ ನಿದ್ರಾಂಗನೆಯ ಬಾಹುಗಳಲ್ಲಿದ್ದರು. ಇವರು ಬೀಡುಬಿಟ್ಟ ಸ್ಥಳದ ಎದುರಿಗೊಂದು ದಟ್ಟವಾದ ಕಾಡಿತ್ತು. ಆ ಕಾಡಿನ ಆ ಕಡೆ ಶತೃಗಳು ಬೀಡು ಬಿಟ್ಟದ್ದರು. ಚಿಂತಾದೇವಿಯು ಅವರು ಅಲ್ಲಿಗೆ ಬಂದಿರುವರೆಂಬ ಸುದ್ದಿಯನ್ನು ಕೇಳಿ, ಅವಸರದಿಂದ ತನ್ನ ಸೈನ್ಯ ಸಿದ್ಧತೆಯನ್ನು ಮಾಡಿಕೊಂಡು ಬಂದಿದ್ದಳು. ಶತೃಗಳಿಗೆ ತನ್ನ ಬರುವಿಕೆ ತಿಳಿದಿಲ್ಲವೆಂದು ಅವಳು ನಂಬಿದ್ದಳು; ಹಾಗೆ ಯೋಚಿಸಿದ್ದು ಅವಳ ಭ್ರಮೆಯಾಗಿತ್ತು! ಅವಳ ಕಡೆಯವನೊಬ್ಬ ಶತೃಗಳ ಕಡೆ ಸೇರಿಕೊಂಡಿದ್ದನು. ಇಲ್ಲಿನ ಸುದ್ದಿ ಅಲ್ಲಿಗೆ ನಿತ್ಯವೂ ತಿಳಿಯುತ್ತಿತ್ತು. ಅವರು ಚಿಂತಾದೇವಿಯನ್ನು ನಿರ್ಮೂಲ ಮಾಡಲು ಒಂದು ಷಡ್ಯಂತ್ರವನ್ನು ಯೋಚಿಸಿದ್ದರು. ಅವಳ ಹತ್ಯೆಗಾಗಿ ಮೂವರು ಸಾಹಸಿಗರಾದ ಸಿಪಾಯಿಗಳನ್ನು ನೇಮಿಸಿದ್ದರು. ಆ ಮೂವರೂ ಸದ್ದಿಲ್ಲದೆ ಕಾಡನ್ನು ದಾಟಿ ಬಂದು, ಚಿಂತಾದೇವಿಯ ಡೇರಾ ಯಾವುದೆಂದು ಒಂದು ಮರದ ಮರೆಯಲ್ಲಿ ನಿಂತು ಆಲೋಚಿಸುತ್ತಿದ್ದರು. ಸೈನ್ಯವೆಲ್ಲಾ ನಿಶ್ಚಿಂತೆಯಿಂದ ಮಲಗಿತ್ತು. ಈ ಕಾರಣದಿಂದ ಅವರಿಗೆ ತಮ್ಮ ಕಾರ್ಯ ಸಿದ್ಧಿಯಲ್ಲಿ ಲೇಶಮಾತ್ರವೂ ಸಂಶಯವಿರಲಿಲ್ಲ. ಸ್ವಲ್ಪ ಹೊತ್ತಾದ ನಂತರ ವೃಕ್ಷದಡಿಯಿಂದ ಹೊರಟು, ಮೊಸಳೆಗಳಂತೆ ತೆವಳುತ್ತಾ ಶಿಬಿರದ ಹತ್ತಿರ ಬರತೊಡಗಿದರು.

ಸೈನ್ಯವೆಲ್ಲವೂ ಘೋರ ನಿದ್ರೆಯಲ್ಲಿತ್ತು. ಪಹರೆಯವರು ಸೋತು ಮಲಗಿದ್ದರು. ಒಂದೇ ಒಂದು ವ್ಯಕ್ತಿ ಚಿಂತಾದೇವಿಯ ಡೇರಾದ ಬಳಿ, ವಿಪರೀತ ಚಳಿಯ ಕಾರಣದಿಂದ, ಮುದುಡಿಕೊಂಡು ಕುಳಿತಿತ್ತು. ಅದು ರತ್ನಸಿಂಹನೇ ಆಗಿದ್ದನು. ಆ ರೀತಿ ಅವನಿದ್ದುದು ಅದೇನು ಹೊಸದಲ್ಲ.

ಪ್ರತಿದಿನವೂ ಚಿಂತಾದೇವಿಯ ಡೇರಾದ ಹೊರಗಡೆಯೇ ಮಲಗುತ್ತಿದ್ದನು. ಘಾತುಕರ ಸುಳಿವನ್ನು ಕೇಳಿ ತಕ್ಷಣ ಎದ್ದು ಕತ್ತಿಯನ್ನು ಸೆಳೆದು ನಿಂತುಕೊಂಡನು. ಮೂವರು ತನ್ನ ಕಡೆಗೆ ಬರುತ್ತಿರುವುದನ್ನು ನೋಡಿದ; ಏನು ಮಾಡುವುದು? ಕೂಗಲೆ! ? ಕೂಗಿದರೆ ಸೈನ್ಯದಲ್ಲಿ ಗಾಬರಿಯಾಗಿ ಅವರು ತಪ್ಪಿಸಿಕೊಳ್ಳಬಹುದು! ಅಥವಾ ಸೈನಿಕರು ತಮ್ಮಲ್ಲಿಯೇ ಹೊಡೆದಾಡಿ ಸಾಯಬಹುದು. ತಾನೊಬ್ಬನೇ ಮೂವರನ್ನು ಎದುರಿಸಲು ಭೀತಿ! ಹೆಚ್ಚು ಯೋಚಿಸಲು ಸಮಯವಿಲ್ಲ. ಕೂಡಲೆ ಮುನ್ನುಗ್ಗಿ ಅವರ ಮೇಲೆ ಬಿದ್ದನು. ಸ್ವಲ್ಪ ಹೊತ್ತು ಕತ್ತಿಗಳು ತಾಗುವುದರಿಂದಾಗುವ ಶಬ್ದವಿತ್ತು. ಸ್ವಲ್ಪ ಹೊತ್ತಿನಲ್ಲೇ ಮೂವರೂ ನಿಶ್ಚೇಷ್ಟಿತರಾಗಿ ಬಿದ್ದರು. ರತ್ನಸಿಂಹನು ಒಂದುಕಡೆ ಗಾಯಗಳಿಂದ ಸೋತು ಬಿದ್ದನು. ಪ್ರಾತಃಕಾಲವಾಯ್ತು. ಚಿಂತಾದೇವಿ ಎದ್ದಳು. ನಾಲ್ಕು ಜನರು ನೆಲದ ಮೇಲೆ ಬಿದ್ದಿರುದನ್ನು ನೋಡಿದಳು. ಅವಳಿಗೆ ಕೊಂಚ ಹೆದರಿಕೆಯಾಯ್ತು. ಹತ್ತಿರ ಹೋಗಿ ನೋಡಿದಳು. ಆದರೆ ರತ್ನಸಿಂಹನ ದೇಹವು ಉಸಿರಾಡುತ್ತಿತ್ತು. ನಡೆದ ಎಲ್ಲಾ ಘಟನೆಯೂ ತಿಳಿದು ಬಂತು. ನಾರೀತ್ವವು ವೀರತ್ವವನ್ನು ಜೈಸಿತು. ಯಾವ ಕಂಗಳಿಂದ ಮಾತೃತುಲ್ಯ ತಂದೆಯು ಮರಣ ಹೊಂದಿದ ಕಾಲದಲ್ಲಿ ಒಂದು ತೊಟ್ಟು ಕಣ್ಣೀರು ಬಿದ್ದಿರಲಿಲ್ಲವೋ, ಅವೇ ಕಣ್ಣಿಳಿಂದ ಈಗ ಕಂಬನಿ ಧಾರೆ ಧಾರೆ ಸುರಿಯಿತು. ರತ್ನಸಿಂಹನ ತಲೆಯನ್ನು ತನ್ನ ತೊಡೆಯ ಮೇಲಿಟ್ಟು ಕೊಂಡಳು. ತನ್ನ ಹೃದಯಾಂಗಣದಲ್ಲಿ ರಚಿಸಿದ್ದ ಸ್ವಯಂವರದಲ್ಲಿ ಅವನಿಗೆ ಜಯಮಾಲೆಯನ್ನು ಹಾಕಿದಳು.

೪

ಎಷ್ಟೋ ತಿಂಗಳುಗಳು ರತ್ನಸಿಂಹನ ಕಂಗಳು ತೆರೆಯಲಿಲ್ಲ. ಚಿಂತಾದೇವಿಯ ಕಂಗಳು ಮುಚ್ಚಲಿಲ್ಲ. ರತ್ನಸಿಂಹನನ್ನು ಒಂದು ಕ್ಷಣ ಕಾಲವೂ ಬಿಟ್ಟಿರುತ್ತಿರಲಿಲ್ಲ. ಅವಳಿಗೆ ರಾಜ್ಯದ ಅಥವಾ ಶತ್ರುಗಳ ಪರಿವೆಯೇ ಇರಲಿಲ್ಲ. ರತ್ನಸಿಂಹನಿಗಾಗಿ ಎಷ್ಟೋ ಜನ ವೀರರನ್ನು ರಣದೇವತೆಗೆ ಆಹುತಿಯಾಗಿ ಕೊಟ್ಟಿದ್ದಳು. ಕೆಲವು ಕಾಲಾನಂತರ ರತ್ನಸಿಂಹನು ಗುಣಮುಖವಾದನು. ಮಂಚದ ಮೇಲೆ ತಾನು ಮಲಗಿ

ರುವನು! ಪಕ್ಕದಲ್ಲಿ ಗಾಳಿ ಹಾಕುತ್ತಾ ಚಿಂತಾದೇವಿ ಕುಳಿತಿದ್ದಾಳೆ. ಅವನು ಕ್ಷೀಣ ಸ್ವರದಿಂದ—ಚಿಂತಾದೇವಿ, ಬೀಸಣಿಗೆಯನ್ನು ತನ್ನಿ! ನಿಮಗೆ ಕಷ್ಟವಾಗುವುದು, (ತೊಂದರೆಯಾಗುವುದು). ಆ ಸಮಯ ದಲ್ಲಿ ಚಿಂತಾದೇವಿಯ ಹೃದಯವು ಸ್ವರ್ಗದ ಅಖಂಡ ಮತ್ತು ಅಪಾರ ವಾದ ಸುಖಾನುಭವದಲ್ಲಿ ಓಲಾಡುತ್ತಿತ್ತು. ಕೆಲವು ತಿಂಗಳುಗಳಿಂದ ಯಾವ ಜೀರ್ಣಹೊಂದಿದ ದೇಹದ ಪಕ್ಕದಲ್ಲಿ ಕುಳಿತು, ನಿರಾಶೆಯಿಂದ ರೋದಿಸುತ್ತಿದ್ದಳೋ, ಅದೇ ಶರೀರ ಇಂದು ಮಾತನಾಡಿದ್ದನ್ನು ನೋಡಿ ಅವಳು ಬಹು ಆಹ್ಲಾದಿತಳಾದಳು. ಕೂಡಲೆ ಅವಳು ಸ್ನೇಹ—ಮಧುರ ಸ್ವರದಿಂದ, "ಪ್ರಾಣನಾಥ! ಇದೇ ನನಗೆ ಕಷ್ಟ ವಾದಲ್ಲಿ ಸುಖವೆಂಬುದು ಯಾವುದು ಹಾಗಾದರೆ? ನನಗೆ ತೋಚು ವುದೇ ಇಲ್ಲ". "ಪ್ರಾಣನಾಥ" ಎಂಬ ಸಂಭೋದನೆಯಲ್ಲಿ ವಿಲಕ್ಷಣ ವಾದುದೊಂದು ಮಂತ್ರವು ಅಡಗಿತ್ತು. ರತ್ನ ಸಿಂಹನ ಕಂಗಳು ಪ್ರಕಾಶಿಸ ತೊಡಗಿದವು. ಜೀರ್ಣ ಮುದ್ರೆಯು ಮಾಯವಾಯಿತು, ನರ—ನರ ಗಳಲ್ಲಿಯೂ ಒಂದು ನೂತನ ಜೀವನದ ಸಂಚಾರವಾದಂತಾಯಿತು. ಆ ಜೀವನದಲ್ಲಿ ಅವನಿಗೆ ಎಷ್ಟು ಸ್ಫೂರ್ತಿ! ಉತ್ಸಾಹ!! ಮಾಧುರ್ಯ!!! ಉಲ್ಲಾಸ!!!! ಮತ್ತು ಕರುಣ!!!!! ರತ್ನ ಸಿಂಹನ ಸರ್ವಾಂಗವೂ ಸ್ಫುರಣೆ ಯನ್ನು ಹೊಂದಿತು. ಅವನ ಭುಜಗಳೆರಡರಲ್ಲೂ ಅತುಲ ಪರಾಕ್ರಮವು ಅನುಭವವಾಗತೊಡಗಿತು. ಪ್ರಪಂಚದ ಆದ್ಯಂತವನ್ನೇ ಗೆಲ್ಲುವೆನೆಂಬ ಅದ್ಭುತಶಕ್ತಿ ತಲೆದೋರಿತು. ಅವನಷ್ಟು ಸುಖೀ; ಅಧಿಕ ಭಾಗ್ಯಶಾಲಿ ಯಾದವನು ಪ್ರಪಂಚದಲ್ಲೇ ಮತ್ತೊಬ್ಬರಿಲ್ಲವೆಂಬ ಗರ್ವವುಂಟಾಯಿತು.

ಚಿಂತಾದೇವಿಯು ಇನ್ನೂ ತನ್ನ ಮಾತನ್ನು ಮುಗಿಸಿರಲಿಲ್ಲ. ಅದೇ ಸರಣಿಯಲ್ಲಿ ಮುಂದುವರಿಸಿದಳು—ನನಗೋಸ್ಕರ ನೀನು ಇಂತಹ ದುಸ್ಸಾಧ್ಯವಾದ ಯಾತನೆಯನ್ನು ಭೋಗಿಸಬೇಕಾಯಿತು. ರತ್ನಸಿಂಹನು ಏಳುವುದಕ್ಕೆ ಪ್ರಯತ್ನ ಪಡುತ್ತಾ—" ಚಿಂತಾ, ತಪವಿಲ್ಲದೆ ಸಿದ್ಧಿ ಹೇಗೆ ದೊರೆಯುವುದು?" ಚಿಂತಾದೇವಿಯು ತನ್ನ ಕೋಮಲ ಕರಗಳಿಂದ ಅವನ ತಲೆಯ ಮೇಲೆ ಸವರುತ್ತಾ— "ಈ ಸಿದ್ಧಿಗಾಗಿ ನೀನು ತಪಸ್ಸನ್ನೇನೂ ಮಾಡಲಿಲ್ಲ, ಸುಳ್ಳನ್ನೇಕೆ ಆಡುತ್ತಿರುವೆ? ನೀನು ಅಬಲೆಯೋರ್ವಳನ್ನು

ರಕ್ಷಿಸಲು ಪ್ರಯತ್ನಿಸುತ್ತಿದ್ದೆ! ನನ್ನ ಬದಲು ಇನ್ನಾರಾದರೂ ಸ್ತ್ರೀ ಇದ್ದಾಗ್ಯೂ ನೀನು ಅಷ್ಟೇ ಪ್ರಯತ್ನದಿಂದ ಅವಳನ್ನು ರಕ್ಷಿಸುತ್ತಿದ್ದೆ! ನನಗೆ ಅದರಲ್ಲಿ ತುಂಬಾ ವಿಶ್ವಾಸ. ನಾನು ನಿನ್ನೊಡನೆ ಸತ್ಯವಾಗಿ ಹೇಳುತ್ತೇನೆ. ನಾನು ಆ ಜೀವನ ಪರ್ಯಂತ ಬ್ರಹ್ಮಚಾರಿಣಿಯಾಗಿರ ಬೇಕೆಂದು ಸಂಕಲ್ಪಿಸಿದ್ದೆನು. ಆದರೆ ನಿನ್ನ ಆತ್ಮೋತ್ಸರ್ಗವು ನನ್ನ ಸಂಕಲ್ಪವನ್ನು ಕದಲಿಸಿತು. ನನ್ನ ಪಾಲನೆಯು ಯೋಧ ಮಧ್ಯದಲ್ಲಿ ಆಗಿದೆ. ಆದ್ದರಿಂದ ಯಾವ ಪುರುಷಸಿಂಹನು ತನ್ನ ಜೀವವನ್ನು ತೃಣ ವೆಂದು ಭಾವಿಸಿ, ಸದಾ ಸ್ವದೇಶಕ್ಕಾಗಿ ಹೋರಾಡಲು ಸಿದ್ಧನಿರುವನೋ ಅಂಥವನ ಚರಣ ಕಮಲಗಳಲ್ಲಿ ನನ್ನ ಹೃದಯವು ಅರ್ಪಣವಾಗಿರುವುದು. ರಸಿಕರ ಭೋಗ ವಿಲಾಸ; ಮೋಜುಗಾರರ ರೂಪರೇಷೆ; ಬಲಿಷ್ಠರ ಶಕ್ತಿ ಯುಕ್ತಿಗಳ ವಿಷಯದಲ್ಲಿ ನನಗೆ ತೃಣ ಮಾತ್ರವೂ ಪೂಜ್ಯ ಬುದ್ಧಿ ಇಲ್ಲ. ಅವರ ನಟನೆಗಳನ್ನು ನಾನು ಕೇವಲ ತಮಾಷೆಯೆಂದು ಭಾವಿಸುತ್ತೇನೆ. ನಿನ್ನ ಹೃದಯದಲ್ಲಿ........ರತ್ನಾ........ನಿಜವಾದ ಉತ್ಸರ್ಗವನ್ನು ಕಂಡೆ; ನಿನ್ನ ದಾಸಿಯಾದೆ! ಇಂದಲ್ಲ! ......ಬಹುದಿನಗಳಿಂದ!!!

ಪ್ರಣಯದ ಪ್ರಥಮ ರಾತ್ರಿ. ನಾಲ್ಕು ದಿಕ್ಕಿನಲ್ಲೂ ಶಾಂತತೆಯ ಸಾಮ್ರಾಜ್ಯ. ಇಬ್ಬರು ಪ್ರೇಮಿಗಳ ಹೃದಯದಲ್ಲಿ ಅಭಿಲಾಷಾಲಹರಿಯು ಮೃದುಲ ರವದೊಡನೇಳುತ್ತಿತ್ತು. ಎಲ್ಲೆಲ್ಲಿಯೂ ಅನುರಾಗಮಯವಾದ ಬೆಳದಿಂಗಳು ಪಸರಿಸಿತ್ತು. ಹಾಸ್ಯಮಯವಾದ ಆ ಸೊಬಗಿನ ಸನ್ನಿ ವೇಶದಲ್ಲಿ ವರ ಮತ್ತು ವಧು ಪ್ರೇಮಾಲಾಪ ಮಾಡುತ್ತಿದ್ದರು.

ಕ್ಷಣಾರ್ಧದಲ್ಲಿಯೇ ಶತೃಗಳು ಕೋಟೆಯ ಬಳಿಗೆ ದಂಡೆತ್ತಿ ಬರುವ ರೆಂಬ ಸುದ್ದಿ ತಿಳಿಯಬಂತು. ಚಿಂತೆಯು ಆಶ್ಚರ್ಯಪಟ್ಟಳು. ರತ್ನ ಸಿಂಹನು ಎದ್ದು ನಿಂತ; ಒರೆಯಲ್ಲಿದ್ದ ಖಡ್ಗವನ್ನೀಚೆ ಸೆಳೆದ.

ಚಿಂತಾದೇವಿಯು ಅವನ ಕಡೆ ಕಾತರ—ಸ್ನೇಹ ದೃಷ್ಟಿಯಿಂದ ನೋಡಿ:—ಕೆಲವು ಸೈನಿಕರನ್ನು ಕಳುಹಿಸು; ನೀನೇ ಹೋಗಬೇಕಾದ ಆವಶ್ಯಕತೆ ಕಂಡು ಬರುವುದಿಲ್ಲ.

ರತ್ನಸಿಂಹ—(ಬಂದೂಕನ್ನು ನಡುಗಟ್ಟಿನಲ್ಲಿಡುತ್ತಾ) ಈ ಬಾರಿ ಅವರು ಬಹು ಸಂಖ್ಯಾತರಾಗಿ ಬಂದಿರಬಹುದು.

ಚಿಂತಾ:— ಹಾಗಾದರೆ ನಾನೂ ಬರುವೆನು!

"ಬೇಡ, ಅವರು ನನ್ನೆದುರು ನಿಲ್ಲಲಾರರು! ಒಂದೇ ಬಾರಿಯ ಮುತ್ತಿಗೆಯಿಂದ ಅವರು ಹಿಂದಕ್ಕೋಡುವಂತೆ ಮಾಡುವೆನು. ಈಶ್ವರನ ಸಂಕಲ್ಪವಿದ್ದಲ್ಲಿ ಈ ನಮ್ಮ ಪ್ರಣಯ ರಾತ್ರಿಯೇ ವಿಜಯ ರಾತ್ರಿಯಾಗಲಿ!"

"ನನ್ನ ಮನಸ್ಸೇಕೋ ಕಾತರ ಪಡುತ್ತಿರುವುದು! ನಿನ್ನನ್ನು ಬಿಡಲು ಮನಸ್ಸು ಹಿಂಜರಿಯುತ್ತಿರುವುದು."

ರತ್ನಸಿಂಹನು ಆ ಸರಳ, ಅನುರಕ್ತ ಆಗ್ರಹದಿಂದ ವಿಹ್ವಲನಾಗಿ ಚಿಂತಾದೇವಿಯನ್ನು ಎದೆಗಪ್ಪಿಕೊಂಡು:—ಪ್ರಾತ:ಕಾಲವಾಗುವುದರಲ್ಲಿ ನಾನು ಹಿಂದಿರುಗಿ ಬರುವೆನು ಪ್ರಿಯೆ!

ಚಿಂತಾದೇವಿಯು ಪತಿಯ ಕಂಠವನ್ನು ಕರಗಳಿಂದ ಸುತ್ತು ಗಟ್ಟಿ, ಕಣ್ಪನಿಗರೆಯುತ್ತಾ—ಅಲ್ಲಿಗೆ ಹೋದರೆ ನೀನು ಬರುವುದು ಬಹಳ ದಿನವಾಗುವುದು. ನನ್ನ ಮನಸ್ಸೆಲ್ಲವೂ ನಿನ್ನೊಡನೆಯೇ ಇರುವುದು. ಹೋಗು—ಆದರೆ ಪ್ರತಿದಿನವೂ ಸಮಾಚಾರ ಕಳುಹಿ ಸುತ್ತಿರು. ಸಮಯ ನಿರೀಕ್ಷಿಸಿ, ಸರಿಯಾಗಿ ಯೋಚಿಸಿ ಮುತ್ತಿಗೆ ಹಾಕ ಬೇಕೆಂದು ನಾನು ಕಾಲ್ಗೆರಗಿ ಬೇಡಿಕೊಳ್ಳುತ್ತೇನೆ. ರತ್ನ........ಶತ್ರು ಗಳನ್ನು ಕಂಡೊಡನೆ ಹುರಿದುಂಬಿ ಕೂಡಲೆ ಮೇಲೆ ಬೀಳುವ ಸ್ವಭಾವ ನಿನ್ನದು........ಆದ್ದರಿಂದ ಯೋಚಿಸಿ ಕೆಲಸ ಮಾಡು.. ....ವಿಜಯಿ ಯಂತೆ ಹೋಗಿ ವಿಜಯಿಯಾಗಿ ದರ್ಶನ ಕೊಡು.

ಚಿಂತಾದೇವಿಯ ಹೃದಯವು ಕಾತರಿಸುತ್ತಿತ್ತು. ವಿಜಯ ಲಾಲಸಾಯುಕ್ತಳಾದ ಅವಳನ್ನು ಈಗ ಭೋಗ ಲಾಲಸೆಯು ಆವರಿ ಸಿತ್ತು. ಸಿಂಹಿಣಿಯಂತೆ ಅರಿಯೆದೆಯು ಬಿರಿಯುವಂತೆ ಗರ್ಜಿಸುತ್ತಲಿದ್ದ ಅದೇ ವೀರ ಬಾಲೆಯು ಈಗ ರತ್ನಸಿಂಹನು ಕುದುರೆಯನ್ನು ಹತ್ತಿದ ಕೂಡಲೆ, ಮನಸ್ಸಿನಲ್ಲಿಯೇ ಅವನ ಕುಶಲವನ್ನು ಕರುಣಿಸುವಂತೆ ದೇವರನ್ನು ಪ್ರಾರ್ಥಿಸುವಷ್ಟು ದುರ್ಬಲವಾಗಿತ್ತು.! ದೂರದಲ್ಲಿ—ಬಹು ದೂರದಲ್ಲಿರುವ ವೃಕ್ಷಸಂಕುಲದಲ್ಲಿ ಮರೆಯಾಗುವವರೆಗೂ ಚಿಂತಾ ದೇವಿಯು ಅವನನ್ನು ಈಕ್ಷಿಸುತ್ತಿದ್ದಳು. ನಂತರ ಎಲ್ಲವೂ ಶೂನ್ಯ

ದೃಶ್ಯ. ಮುಂದಿನ ಪರ್ವತ ಸ್ತೋಮಗಳು ಅವನನ್ನು ತಮ್ಮ ಸಂಕುಲ ದಲ್ಲಿ ಮರೆಮಾಡಿಕೊಂಡವು. ಉಷೆಯ ಅರುಣೋದಯದ ಕಾಂತಿಯು ವೃಕ್ಷದ ಮರೆಯಿಂದ ಮೇಲ್ಬಂದು ಎಲ್ಲೆಡೆಯಲ್ಲೂ ಪಸರಿಸಿತು! ಆಗ ಆವಳ ಮೋಹ ವಿಸ್ಮೃತಿ ಮಾಯವಾಯ್ತು. ಸುತ್ತೆಲ್ಲ ಶೂನ್ಯ! ಅರಮನೆ ಯೊಳಗೆ ಹೊಕ್ಕು ಮೃದು ಶಯ್ಯೆಯಲ್ಲಿ ಮುಖವನ್ನು ಮುಚ್ಚಿಕೊಂಡು ರೋದಿಸತೊಡಗಿದಳು.

೫

ರತ್ನಸಿಂಹನ ಜೊತೆಗೆ ಕೇವಲ ನೂರುಮಂದಿ ಯೋಧರಿದ್ದರು. ಆದರೂ ಆವರೆಲ್ಲರೂ ಸುರಿತ, ಪ್ರಾಣಗಳನ್ನು ತೃಣವೆಂದು ಭಾವಿಸುವ ವೀರ [ಯೋಧರಾಗಿದ್ದರು. ಅವರು ವೀರೋಲ್ಲಾಸ ಭರಿತವಾದ ವೀರ—ರಸ—ಪೂರ್ಣ ಗೀತೆಯೊಂದನ್ನು ಹಾಡುತ್ತಾ ಮುಂದುವರಿ ಯುತ್ತಿದ್ದರು. ಪರ್ವತಮಯವಾದ ಆ ಪ್ರದೇಶಗಳು ಅವರ ಧ್ವನಿ ಯನ್ನು ಪ್ರತಿಧ್ವನಿಸುತ್ತಿತ್ತು. ಕುದುರೆಗಳ ಖುರ ಪುಟಗಳ ಧ್ವನಿಯು ಅವರ ಗೀತೆಗೆ ತಾಳ ಹಾಕುತ್ತಿದ್ದವು. ರಾತ್ರಿ ಹರಿಯಿತು; ಸೂರ್ಯನು ತನ್ನ ರಕ್ತ ವರ್ಣಿತ ಕಿರಣಗಳನ್ನು ಚಾಚ್ಚ ತೊಡಗಿದನು. ಆ ರಕ್ತ ಮಯ ಪ್ರಕಾಶದಲ್ಲಿ ಪರ್ವತ ಪ್ರಾಂತಗಳಲ್ಲಿ ಬೀಡು ಬಿಟ್ಟಿದ್ದ ಸೈನಿಕರ ಗುಡಾರಗಳು ಕಾಣ ತೊಡಗಿದವು.

ರತ್ನಸಿಂಹನಾದರೋ ತಲೆ ತಗ್ಗಿಸಿಕೊಂಡು, ವಿಯೋಗ—ವ್ಯಥಿತ ಹೃದಯದಿಂದ, ಒಲ್ಲದ ಮನಸ್ಸಿನಿಂದ, ಮಂದಗತಿಯಲ್ಲಿ ಹಿಂಭಾಗದಲ್ಲಿ ಹೋಗುತ್ತಿದ್ದನು. ಹೆಜ್ಜೆ ಮುಂದಿಡಲ್ಪಟ್ಟಂತೆಲ್ಲಾ ಮನಸ್ಸು ಹಿಂದೆಳೆ ಯುತ್ತಿತ್ತು. ಜೀವನದಲ್ಲಿ ಮೊದಲನೆಯ ಸಾರಿ ಅವನನ್ನು ದುಶ್ಚಿಂತೆಯು ಮುಸುಕಿತು. ಯುದ್ಧದ ಪರಿಸಮಾಪ್ತಿ ಏನಾಗುವುದೆಂದು ಯಾರಿಗೆ ಗೊತ್ತು! ಆ ಸ್ವರ್ಣಮುಖ ಮತ್ತೆ ಮತ್ತೆ ಅವನ ಕಣ್ಮುಂದೆ ಸುಳಿ ಸುಳಿದು ಹೃದಯ ವೇದನೆಯನ್ನುಂಟು ಮಾಡುತ್ತಿತ್ತು. ಚಿಂತಾ ದೇವಿಯ ಸಜಲ ನೇತ್ರಗಳಿಂದ ಕೂಡಿದ ಮುಖ ಮಂಡಲವು ನೆನಪಿಗೆ ಬಂದು, ಕುದುರೆಯನ್ನು ಹಿಂದೋಡಿಸೋಣವೇ ಎಂಬ ಮನಸ್ಸನ್ನುಂಟು ಮಾಡುತ್ತಿತ್ತು. ಪ್ರತಿಕ್ಷಣದಲ್ಲಿಯೂ ರಣೋತ್ಸಾಹವು ಶಿಥಿಲವಾಗು

ತ್ತಿತ್ತು. ಆಕಸ್ಮಾತ್ತಾಗಿ ಆಗ ಒಬ್ಬ ಸರದಾರನು ಅವನ ಬಳಿ ಬಂದು— ರತ್ನಸಿಂಹರೇ, ಸರದಾರರೇ, ಆ ಪರ್ವತ ಪ್ರದೇಶದಲ್ಲಿ ಸೈನಿಕರು ಬೀಡು ಬಿಟ್ಟಿರುವರು. ಈಗ ನಿಮ್ಮ ಸಲಹೆ ಏನು? ಈ ಕೂಡಲೆ ಹೋಗಿ ಧಾಳಿ ಯನ್ನಾರಂಭಿಸೋಣ. ನಮ್ಮ ಸುಳಿವು ಸ್ವಲ್ಪ ಗೊತ್ತಾದರೆ ಅವರಿಗೆ, ಅವರು ಓಡಿ ಹೋಗಬಹುದು......ಅವರು ಸಾವಿರಕ್ಕಿಂತ ಹೆಚ್ಚಾಗಿರ ಲಾರರು.

ರತ್ನಸಿಂಹನು ಚಿಂತಿತ ನೇತ್ರಗಳಿಂದ ಶತ್ರು ದಳದ ಕಡೆಗೆ ನೋಡಿದನು.

"ಹೌದು, ಹಾಗೆಯೇ ಕಾಣುತ್ತದೆ."

ಸಿಪಾಯಿ:—ಹಾಗಾದರೆ ಅವರನ್ನು ಮುತ್ತೋಣವೆ!

ರತ್ನ—ನಿನ್ನ ಇಷ್ಟದಂತೆ ಮಾಡು. ಅವರು ನಮಗಿಂತ ಅಧಿಕ ರಾಗಿದ್ದಾರೆ. ಅದನ್ನು ಯೋಚಿಸು.

ಸಿಪಾಯಿ—ಪರವಾಗಿಲ್ಲ. ಇದಕ್ಕಿಂತ ದೊಡ್ಡ ಸೈನ್ಯದೊಂದಿಗೆ ನಾವು ಹೋರಾಡಿ ಜೈಸಲಿಲ್ಲವೆ?

ರತ್ನ—ಸರಿ! ಆದರೆ, ಹಗಲು ಕಂಡ ಬಾವಿಗೆ ಇರುಳು ಬೀಳುವರೆ!

ಸಿಪಾಯಿ—ಸರದಾರರೇ! ಇದೇನನ್ನು ಹೇಳುವಿರಿ! ತನುಮನ ಧನಗಳನ್ನು ಮರೆತು, ಮಾತೃಭೂಮಿಯ ಸಂರಕ್ಷಣೆಗಾಗಿ ಹೋರಾಡು ವುದೇ ವೀರಯೋಧನ ಲಕ್ಷಣವಲ್ಲವೇ? ನೀವು ಆಜ್ಞಾಪಿಸುವುದೊಂದೇ ತಡ, ನಂತರ ನೋಡಿ ನಮ್ಮ ಸಾಹಸವನ್ನು!

ರತ್ನ—ನಾವೀಗ ಬಹಳ ಸೋತಿರುವೆವು. ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳುವುದೊಳ್ಳೆಯದಲ್ಲವೆ!

ಸಿಪಾಯಿ—ಬೇಡ. ಇದೊಳ್ಳೆಯ ಸುಸಂಧಿ. ಇಂತಹ ಸುಂದರ ಅವಕಾಶ ಇನ್ನು ಸ್ವಲ್ಪ ತಡಮಾಡಿದರೆ ಸಿಗಲಾರದು.

ರತ್ನ—ಹಾಗಾದರೆ ದಾಳಿಯನ್ನು ಮಾಡಿ.

ಕ್ಷಣಾರ್ಧದಲ್ಲಿಯೇ ಸೈನಿಕರ ಮೇಲೆ ನುಗ್ಗಿದರು. ಆದರೆ ಶತೃ ಗಳು ತಮ್ಮ ಸಂರಕ್ಷಣೆಯನ್ನು ಯೋಚಿಸಿಕೊಂಡೇ, ಸರಿಯಾದ ಸೈನ್ಯ ಸಿದ್ಧತೆಯಿಂದ ಬಂದಿದ್ದರು. ಆದರೆ ಮುನ್ನುಗ್ಗಿದ ಮೇಲೆ ಹಿಂದೆಗೆಯು

 

ವಂತಿರಲಿಲ್ಲ. ಸ್ವಲ್ಪ ಸೈನ್ಯವನ್ನು ನೋಡಿ ಶತ್ರುಗಳು ಬಹಳ ಸಂತೋಷ ಪಟ್ಟರು. ಅವರಲ್ಲಿ ಪ್ರತಿಯೊಬ್ಬರೂ ರತ್ನಸಿಂಹನಿಂದ ಪೆಟ್ಟು ತಿಂದವ ರಾದ್ದರಿಂದ ಅವನೊಡನೆ ಹೋರಾಡಲು ಹಾತೊರೆಯುತ್ತಿದ್ದರು. ಈಗೊಳ್ಳೆಯ ಸಮಯ ದೊರೆತಿತ್ತು.. ಎಲ್ಲರೂ ರತ್ನಸಿಂಹನನ್ನು ಆರಿಸು ತ್ತಿದ್ದರು. ಆದರೆ ರತ್ನಸಿಂಹನ ಪತ್ತೆಯೇ ಆಗಲಿಲ್ಲ. ಎಲ್ಲಿಗೆ ಹೋದನು! ಯಾರಿಗೂ ಗೊತ್ತಿರಲಿಲ್ಲ.

ಆದರೆ ಅವನು ಎಲ್ಲಿಗೂ ಹೋಗಲಾರ! ತನ್ನ ಜೊತೆಯವರನ್ನು ಇಂತಹ ಕಠಿಣ ಪ್ರಸಂಗದಲ್ಲಿ ಸಿಕ್ಕಿಸಿ ಬಿಟ್ಟು ಹೋಗುವವನಲ್ಲ!! ಅವನು ಅಲ್ಲೇ ಇರಬೇಕು! ಅಲ್ಲೆಲ್ಲಿಯೋ ಕುಳಿತು ಯುದ್ಧರೀತಿಯನ್ನು ಯೋಚಿ ಸುತ್ತಿರಬಹುದು.

ಒಂದು ಕ್ಷಣ ಮಾತ್ರದಲ್ಲಿ ಶತ್ರುಗಳು ಮುನ್ನುಗ್ಗಿದರು. ಅಂತಹ ಅಸಂಖ್ಯಾತ ಸೈನಿಕರೆದುರಿನಲ್ಲಿ ಈ ಸಾವಿರ ಯೋಧರು ನಿಲ್ಲುವರೆ! ನಾಲ್ಕು ಕಡೆಯಲ್ಲಿಯೂ ಯೋಧರು ಸರದಾರನನ್ನು ಕೂಗತೊಡಗಿದರು — "ಸರದಾರರೇ! ಎಲ್ಲಿ ಹೋದಿರಿ? ಶತ್ರುಗಳು ಮುನ್ನುಗ್ಗುತ್ತಿರುವರು! ಏಕೆ ಮೌನವಾಗಿರುವಿರಿ? ಮುಂದೆ ಬಂದು ಮಾರ್ಗ ತೋರಿಸಿ! ಉತ್ಸಾ ಹಿಸಿರಿ!"—ಎಂಬುದಾಗಿ. ಆದರೆ ಆಗಲೂ ರತ್ನಸಿಂಹನು ಕಾಣಲಿಲ್ಲ. ಯುದ್ಧದ ಬಿರುಸು ಜಾಸ್ತಿಯಾಗುತ್ತಾ ಬಂತು. ಬುಂದೇಲಿ ಯೋಧರು ಮುಷ್ಟಿಯಲ್ಲಿ ಜೀವವನ್ನು ಹಿಡಿದುಕೊಂಡು ಹೋರಾಡತೊಡಗಿದರು. ಒಬ್ಬೊಬ್ಬರೂ ಹತ್ತುಮಂದಿ ಶತ್ರುಗಳನ್ನು ಎದುರಿಸಬೇಕಾಯಿತು. ಅದು ಯುದ್ಧವಾಗಿರಲಿಲ್ಲ; ಪ್ರಾಣಗಳನ್ನು ಪಣವಾಗಿಟ್ಟ ಜೂಜಾಟವಾಗಿತ್ತು. ಎಷ್ಟು ಸಾಧ್ಯವೋ, ಎಲ್ಲಿಯವರೆಗೆ ಸಾಧ್ಯವೋ ಅಲ್ಲಿಯವರೆಗೂ ಹೋರಾಡಿದರು. ಅಂತವೇನಾಗುವುದೆಂಬ ಚಿಂತೆ ಯಾರಿಗೂ ಇರಲಿಲ್ಲ. ಶತ್ರು ಸೈನ್ಯಾಧಿಪತಿಯವರೆಗೂ ಮುನ್ನುಗ್ಗಿದ್ದರು. ಅವನ ಆನೆಯ ಮೇಲೆ ಹತ್ತಿ ಮುತ್ತಲು ಪ್ರಯತ್ನಪಟ್ಟರು. ಆ ಅಲ್ಪ ಸಂಖ್ಯಾತ ಬುಂದೇಲಿ ಯೋಧರ ಪರಾಕ್ರಮವನ್ನು ನೋಡಿ ಶತ್ರುಗಳೂ ಕೂಡ 'ಭೇಷ್' ಎನ್ನತೊಡಗಿದರು. ಆದರೆ ಅಂತಹ ಯೋಧರು ಕೀರ್ತಿ ಗಳಿಸಿದರೇ ಹೊರತು ಜಯಗಳಿಸಲಾಗಲಿಲ್ಲ. ಒಂದೇ ಒಂದು ಗಂಟೆ

ಯಲ್ಲಿ ರಂಗಮಂಚದ ತೆರೆಯು ಜಾರಿತು. ಆಟವು ಮುಗಿಯಿತು. ಒಂದು ಬಿರುಗಾಳಿಯು ಬೀಸಿತು. ವೃಕ್ಷಾದಿಗಳನ್ನು ಕಿತ್ತೆಸೆಯುತ್ತಾ ಹೊರಟು ಹೋಯಿತು. ಆದರೆ ಸಂಘಟನವಿಲ್ಲದೆ ಹಾಗಾಗಬೇಕಾಯ್ತು. ಸಂಘಟನ ಶಕ್ತಿಯನ್ನೀಯುವ ಸರದಾರ ನಿಲ್ಲದುದೇ ಆ ಅನಾಹುತಕ್ಕೆ ಕಾರಣವಾಯ್ತು! ವಿಜಯಿಗಳಾದ ಮರಾಟರು ಪ್ರತಿಯೊಂದು ಶವವನ್ನೂ ಪರೀಕ್ಷಿಸಿದರು! ರತ್ನಸಿಂಹನು ಅವರ ಕಣ್ಣನ್ನು ಚುಚ್ಚುತ್ತಿದ್ದನು. ಅವನ ರಕ್ತ ಹೀರಲು ಹಾತೊರೆಯುತ್ತಿದ್ದರು. ಆ ಯೋಧರು ಆ ಪರ್ವತ ಪ್ರದೇಶದ ಪ್ರತಿಯೊಂದು ಕಲ್ಲನ್ನೂ ಶೋಧಿಸಿದರು. ಆದರೆ ರತ್ನಸಿಂಹ ದೊರೆಯಲಿಲ್ಲ! ವಿಜಯ ಲಭಿಸಿತು, ಆದರೆ ಸಂಪೂರ್ಣವಾಗಲಿಲ್ಲ!!

೬

ಚಿಂತಾದೇವಿಯ ಹೃದಯದಲ್ಲಿ ಅದೇನೋ ಬಗೆಬಗೆಯ ಶಂಕೆಗಳು ಉತ್ಪನ್ನವಾಗುತ್ತಿದ್ದವು. ಅವಳು ಎಂದೆಂದೂ ಅಂದಿನಷ್ಟು ನಿಶ್ಯಕ್ತಳಾಗಿರಲಿಲ್ಲ. ಬುಂದೇಲರು ಅಂದಿನ ಯುದ್ಧದಲ್ಲಿ ವಿಜಯವನ್ನು ಪಡೆಯುವರೋ ಇಲ್ಲವೋ ಎಂಬ ಭಯವಿರಲಿಲ್ಲ. ಆದರೆ ಯಾವುದೋ ವಿಲಕ್ಷಣ ಭಯವೊಂದು ಅವಳನ್ನು ಪೀಡಿಸುತ್ತಿತ್ತು. ಅವಳ ಹಣೆಯಲ್ಲಿ ಸುಖ ಜೀವನ ಬರೆದಿರಲಿಲ್ಲ. ಹಾಗಿದ್ದಿದ್ದರೆ ಅವಳು ಬಾಲ್ಯಾವಸ್ಥೆಯಲ್ಲಿಯೇ ತನ್ನ ತಾಯಿಯನ್ನು ಏಕೆ ಕಳೆದುಕೊಳ್ಳುತ್ತಿದ್ದಳು? ತಂದೆಯ ಜೊತೆಯಲ್ಲಿ ವನವನ್ನೇಕೆ ತಿರುಗಬೇಕಾಗಿತ್ತು? ಗುಹೆ ಮರಗಳಲ್ಲಿ ಏಕೆ ಅಡಗಿಕೊಳ್ಳಬೇಕಾಗಿತ್ತು! ಆದರೆ ಆ ತಂದೆಯ ಆಶ್ರಯವಾದರೂ ಅವಳ ಹಣೆಯಲ್ಲಿ ಹೆಚ್ಚುಕಾಲವಿರಲಿಲ್ಲ. ತಂದೆಯೂ ಗತಿಸಿದನು. ಅಂದಿನಿಂದ ಅವಳಿಗೆ ಒಂದು ದಿನವಾದರೂ ವಿಶ್ರಾಂತಿ ಎಂಬುದು ಇರಲಿಲ್ಲ. ಅಂದು ಅವಳ ದುರ್ಬಲ ಹೃದಯದಲ್ಲಿ ವಿಚಿತ್ರ ಭಾವನೆಗಳು ಉತ್ಪನ್ನವಾಗುತ್ತಲಿದ್ದವು. ದೇವರು ತನ್ನ ಪ್ರಿಯತಮನನ್ನು ಕ್ಷೇಮವಾಗಿ ಕರೆತರಲಿ; ಹಾಗೆ ಅವನು ಬಂದ ಕೂಡಲೆ, ಅವನೊಡನೆ ಯಾವುದಾದರೊಂದು ದೂರದಲ್ಲಿರುವ ಗ್ರಾಮದಲ್ಲಿ ಹೋಗಿ ಜೀವಿಸೋಣ ಪತಿದೇವನನ್ನು ಆರಾಧಿಸುತ್ತಾ ಜೀವನವನ್ನು ಸಫಲಗೊಳಿಸಿಕೊಳ್ಳೋಣ! ಈ

ಸಂಗ್ರಾಮವು ಸಾಕು! ಈ ಅತುಳೈಶ್ವರ್ಯ ಯುಕ್ತವಾದ ರಾಜ್ಯವು ಸಾಕು! ಅಂದು ಮೊದಲು ಅವಳ ಮನಸ್ಸಿನಲ್ಲಿ ನಾರೀತ್ವವು ಜಾಗ್ರತವಾಗಿತ್ತು.

ಸಂಧ್ಯಾಕಾಲ. ಅಪಜಯ ಹೊಂದಿದ ಯೋಧನೊಬ್ಬನು ಮುಖವನ್ನು ಮುಚ್ಚಿಕೊಳ್ಳಲು ಮರೆಯನ್ನು ಹುಡುಕಿಕೊಂಡು ಹೋಗುವಂತೆ ಸೂರ್ಯನು ಪಶ್ಚಿಮಾಂಬುಧಿಯ ಕಡೆ ಸಾಗುತ್ತಿದ್ದನು. ಕ್ಷಣಾರ್ಧದಲ್ಲಿ, ಬರಿಯತಲೆ; ಬರಿಗಾಲು; ಬರಿಗೈಗಳಿಂದ ಕೂಡಿದ ಒಬ್ಬ ಸೈನಿಕನು ಅವಳ ಮುಂದೆ ಬಂದು ನಿಂತನು. ಚಿಂತಾದೇವಿಗೆ ವಜ್ರಾಘಾತವಾದಂತಾಯ್ತು. ಒಂದು ಮುಹೂರ್ತ ಕಾಲ ಮರ್ಮಾಹತಳಾದಂತೆ ನಿಶ್ಚಲಳಾಗಿದ್ದಳು. ನಂತರ ಎದ್ದು ಗಾಬರಿಗೊಂಡಿದ್ದ ಸೈನಿಕನ ಬಳಿಗೆ ಬಂದು, ಆತುರ ಸ್ವರದಿಂದ—"ಯಾರು ಯಾರು ಉಳಿದರು?"

"ಯಾರೂ ಇಲ್ಲ, ಯಾರೂ ಇಲ್ಲ"

ಚಿಂತಾದೇವಿಯು ತಲೆಯ ಮೇಲೆ ಕೈಯಿಟ್ಟುಕೊಂಡು ಕುಳಿತಳು.

ಸೈನಿಕ ಪುನಃ- "ಮರಾಟೆಯುವರು ಹತ್ತಿರ ಬರುತ್ತಿರುವರು"

"ಹತ್ತಿರ ಬಿರುತ್ತಿರುವರು!

"ಬಹಳ ಸಮೀಪದಲ್ಲಿ"

"ಹಾಗಾದರೆ ಜಾಗ್ರತೆ, ಚಿತೆಯನ್ನು ಸಿದ್ಧಗೊಳಿಸು. ಸಮಯವಿಲ್ಲ. ಜಾಗ್ರತೆ."

"ನಾವಿನ್ನೂ ಹೋರಾಡಲು ಸಿದ್ಧರಿದ್ದೇವೆ"

"ನಿಮ್ಮ ಇಷ್ಟದಂತೆ ಮಾಡಿ. ನನ್ನ ಕರ್ತವ್ಯವನ್ನು ನಾನು ಮಾಡುತ್ತೇನೆ"

"ಕೋಟೆಯನ್ನು ಮುಚ್ಚಿ ನಾವು ತಿಂಗಳುಗಟ್ಟಲೆ ಹೋರಾಡಬಹುದು"

"ಹಾಗೆ ಮಾಡಿ. ನಾನಂತೂ ಈಗ ಹೋರಾಡಲಾರೆ."

ಪ್ರಕಾಶವನ್ನು ಅಂಧಕಾರವು ಜೈಸುತ್ತಾ ಸಮೀಪಿಸುತ್ತಿರಲು ವಿಜಯಿಗಳಾದ ಮರಾಟರು ಶತ್ರುಗಳನ್ನು ಹುಂಡರಿಸುತ್ತಾ ಕೋಟೆಯನ್ನು ಸಮೀಪಿಸುತ್ತಿದ್ದರು.

ಚಿತೆಯು ಅರಮನೆಯಲ್ಲಿ ಸಿದ್ಧವಾಗುತ್ತಿತ್ತು. ಚಿತೆಗೆ ಬೆಂಕಿ

ಇಟ್ಟುದೂ ಆಯಿತು. ಸತಿಯಾದ ಚಿಂತಾದೇವಿಯು ಸರ್ವವಿಧಾಲಂಕಾರ ಭೂಷಿತಳಾದಳು. ಪ್ರಸನ್ನಮುಖಿಯಾಗಿ ಅನ್ಯಮಾರ್ಗದಿಂದ ಪತಿಲೋಕಯಾತ್ರೆ ಮಾಡಲು ಸಿದ್ಧಳಾದಳು.

೭

ಚಿಂತಾದೇವಿಯ ಸುತ್ತಲೂ ಹೆಂಗಸರೂ, ಗಂಡಸರೂ ತುಂಬಿದ್ದರು. ಶತ್ರುಗಳು ಕೋಟೆಯನ್ನು ಮುತ್ತಲು ಬರುತ್ತಿದ್ದಾರೆ. ಅದರ ಚಿಂತೆಯಾರಿಗೂ ಇಲ್ಲ. ಶೋಕ ಮತ್ತು ಸಂತಾಪಗಳಿಂದ ಎಲ್ಲರೂ ಉದಾಶೀನರಾಗಿದ್ದರು. ಅದೇ ವಿಸ್ತಾರವಾದ ಹೊರಾಂಗಣದಲ್ಲಿ ವಿವಾಹ ಮಂಟಪವು ರಚಿಸಲ್ಪಟ್ಟಿತು. ಅಂತು ಸತಿ ನಡಿಸಿದ್ದಲ್ಲಿ ಆಗ ಹವನ ಕುಂಡವಾಗಿತ್ತು. ಅಂದೂ ಇದೇ ರೀತಿ ಅಗ್ನಿಯು ಪ್ರಜ್ವಲಿಸುತ್ತಿತ್ತು; ಜನರೂ ನೆರೆದಿದ್ದರು. ಆದರೆ ಇಂದು—ಅಂದಿನ ದೃಶ್ಯಗಳಲ್ಲಿ ಎಷ್ಟು ಅಂತರ! ಹೌದು! ಸಾಮಾನ್ಯರಿಗೆ ಅಂತರವಾಗಿ ಕಾಣಬಹುದು. ಆದರೆ ನಿಜವಾಗಿಯೂ ಇದು, ಆ ಯಜ್ಞದ ಪೂರ್ಣಾಹುತಿ! ಆ ಪ್ರತಿಜ್ಞೆಯ ಪಾಲನೆ......

ಆಕಸ್ಮಾತ್ತಾಗಿ ಕುದುರೆಯ ಖುರಪುಟ ಧ್ವನಿ ಕೇಳಿಸ ತೊಡಗಿತು. ಯಾವನೋ ಸೈನಿಕನು ಅತ್ತ ಕಡೆಯೇ ಕುದುರೆಯ ಮೇಲೆ ಬರುವಂತಿತ್ತು. ಸ್ವಲ್ಪ ಹೊತ್ತಿನಲ್ಲೇ ಆ ಧ್ವನಿ ಅಡಗಿತು; ಒಬ್ಬ ಸೈನಿಕನು ಹೊರಾಂಗಣವನ್ನು ಪ್ರವೇಶಿಸಿದನು. ಜನರು ಆಶ್ಚರ್ಯದಿಂದ ನೋಡಿದರು—ಅವನು ರತ್ನಸಿಂಹ!

ರತ್ನಸಿಂಹನು ಚಿತೆಯ ಬಳಿಗೆ ಹೋಗಿ ಏದುತ್ತಾ—"ಪ್ರಿಯೇ! ನಾನಿನ್ನು ಬದುಕಿರುವೆನು! ಇದೇನನ್ನು ಮಾಡುತ್ತಿರುವೆ!"

ಚಿತೆಯು ಚೆನ್ನಾಗಿ ಉರಿಯುತ್ತಿತ್ತು; ಚಿಂತಾದೇವಿಯ ಪೀತಾಂಬರದ ಸೆರಗಿಗೆ ಬೆಂಕಿ ತಗಲಿತ್ತು. ರತ್ನಸಿಂಹನು ಉನ್ಮತ್ತನಂತೆ ಚಿತೆಯಲ್ಲಿ ನುಗ್ಗಿ, ಚಿಂತಾದೇವಿಯನ್ನು ಹಿಡಿದುಕೊಂಡು ಹೊರಗೆ ತರಲು ಪ್ರಯತ್ನಪಟ್ಟನು. ಜನರು ಸುತ್ತಲಿನ ಕಟ್ಟಿಗೆಗಳನ್ನು ಸೆಳೆಯತೊಡಗಿದರು. ಆದರೆ ಚಿಂತಾದೇವಿಯು ಪತಿಯ ಕಡೆ ನೋಡಲಿಲ್ಲ; ಅವನನ್ನು ದೂರ ಹೋಗುವಂತೆ ಸನ್ನೆ ಮಾಡಿದಳು.

ರತ್ನಸಿಂಹನು ಗದ್ಗದಕಂಠದಿಂದ—ಹಾಯ್‌! ಪ್ರಿಯೇ, ನಿನಗೆ ಏನಾಗಿದೆ? ನನ್ನ ಕಡೆ ಏಕೆ ನೋಡುವುದಿಲ್ಲ? ನಾನಿನ್ನೂ ಬದುಕಿರುವೆನಲ್ಲಾ!

ಚಿಂತಾದೇವಿ—ನಿನ್ನ ಹೆಸರು ರತ್ನಸಿಂಹ. ಆದರೆ ನೀನು ನನ್ನ ರತ್ನಸಿಂಹನಲ್ಲ!

"ನನ್ನ ಕಡೆ ನೋಡಿಯಾದರೂ ನೋಡು! ನಾನೇ ನಿನ್ನ ದಾಸ!! ನಿನ್ನ ಉಪಾಸಕ!! ನಿನ್ನ ಪತಿ!!!"

"ನನ್ನ ಪತಿಯು ವೀರಗತಿಯನ್ನೈದಿದನು."

"ಅಯ್ಯೋ, ನಾನು ಹೇಗೆ ನಿನ್ನನ್ನು ಸಮಾಧಾನಪಡಿಸಲಿ! ಜನರೆ! ಹೇಗಾದರೂ ಮಾಡಿ ಅಗ್ನಿಯನ್ನು ಶಾಂತಗೊಳಿಸಿ. ನಾನು ರತ್ನಸಿಂಹನೇ ಪ್ರಿಯೆ! ನೀನು ನನ್ನನ್ನು ಗುರ್ತಿಸಲಾರೆಯೇನು?

ಅಗ್ನಿ ಶಿಖೆಯು ಚಿಂತಾದೇವಿಯ ಮುಖದ ವರೆಗೂ ಬಂತು. ಆಗ ಆ ವೀರಸತಿ ಕಮಲಾಸನಸ್ಥ ಲಕ್ಷ್ಮಿಯಂತೆ ತೋರತೊಡಗಿದಳು. ಚಿಂತಾದೇವಿಯು ಸ್ಪಷ್ಟ ಸ್ವರದಿಂದ— "ಚೆನ್ನಾಗಿ ಗುರ್ತಿಸಿರುವೆನು! ನೀನು ನನ್ನ ರತ್ನಸಿಂಹನಲ್ಲ! ನನ್ನ ರತ್ನಸಿಂಹನು ನಿಜವಾದ ವೀರ ಸಾಗರನು!! ಅವನು ಆತ್ಮರಕ್ಷಣೆಗಾಗಿ, ಈ ತುಚ್ಛ ದೇಹವನ್ನು ರಕ್ಷಿಸಿಕೊಳ್ಳಲಿಕ್ಕಾಗಿ, ತನ್ನ ಕ್ಷತ್ರಿಯ ಧರ್ಮವನ್ನು ಪರಿತ್ಯಜಿಸುವವನಾಗಿರಲಿಲ್ಲ! ನಾನು ಯಾರ ಚರಣದಾಸಿಯೋ, ಯಾವ ವೀರನು ದೇವಲೋಕದಲ್ಲಿ ವಿರಾಜಿಸುತ್ತಿರುವನೋ, ಆ ವೀರ ರತ್ನಸಿಂಹನಿಗೆ ಕಲಂಕ ತರಬೇಡ! ಅವನು ವೀರ ರಜಪೂತನಾಗಿದ್ದನು, ರಣಕ್ಷೇತ್ರದಿಂದ ಓಡಿಹೋಗುವ ಹೇಡಿಯಾಗಿರಲಿಲ್ಲ!'

ಅಂತಿಮ ಶಬ್ದ ಹೊರಡುತ್ತಿರುವಾಗಲೇ, ಚಿತೆಯು ಅವಳನ್ನು ಪೂರ್ಣ ಆವರಿಸಿತು. ನಂತರ ಒಂದೇ ಒಂದು ಕ್ಷಣದಲ್ಲಿ ಆ ಅನುಪಮ ರೂಪರಾಶಿ, ಆ ಆದರ್ಶ ವೀರ ರಮಣಿ, ಆ ನಿಜವಾದ ಸತಿ ಅಗ್ನಿರಾಶಿಯಲ್ಲಿ ವಿಲೀನವಾದಳು.

ರತ್ನಸಿಂಹನು ಹತಬುದ್ಧಿಯಿಂದ ಸುಮ್ಮನೆ ನಿಂತು, ಆ ಶೋಕಮಯ ದೃಶ್ಯವನ್ನು ನೋಡುತ್ತಿದ್ದನು. ನಂತರ ಅಕಸ್ಮಾತ್ತಾಗಿ ಒಂದು ನೀಳವಾದ ಉಸಿರ್ಗರೆದು ಅವನೂ ಅದೇ ಚಿತೆಯಲ್ಲಿಯೇ ಹಾರಿದನು.

---

೫

# ಬಡಬಾಳು

ನಂಜಪ್ಪನ ಸಂಸಾರವೆಂದರೆ ಅವನು, ಅವನ ಹೆಂಡತಿ, ಅವನ ಆರು ವರ್ಷದ ಮಗು. ಅವನ ಮನೆ ಆ ಊರಿನ ಓಣಿಯಲ್ಲಿ. ಅವನಿಗೆ ಚರ್ಮದ ಕಾರ್ಖಾನೆಯಲ್ಲಿ ಕೆಲಸ. ಅಂದು ಅವನು ತನ್ನ ನಿತ್ಯ ನಿಯಮದಂತೆ ೬ ಗಂಟೆಗೆ ಹೊರಟು ಹೋಗಿದ್ದನು. ಆಗಲೇ ೯ ಗಂಟೆಯೂ ಗಿತ್ತು. ಅಂದಿನ ರೊಟ್ಟಿಗೆ ಬೇಕಾಗಿದ್ದ ಹಿಟ್ಟನ್ನು ತರಲು ಲಕ್ಕಿ ಮಾರ್ಕೆಟ್ಟಿಗೆ ಹೊರಡುವುದರಲ್ಲಿದ್ದಳು.

ಲಕ್ಕಿ ಮನೆಗೆಲಸಗಳನ್ನು ಮಾಡಿಕೊಂಡು ಮಾರ್ಕೆಟ್ಟಿಗೆ ಹೊರಟಳು. ಎರಡು ದಿನದಿಂದ ಹೊಟ್ಟೆಗೆ ಇರಲಿಲ್ಲ. ಪಾಪ! ಕಂಕುಳಲ್ಲಿ ಮಗುವನ್ನು ಕರೆದುಕೊಂಡು ಬೇಗ ಬೇಗ ಹೊರಟಳು. ಸಾಕಾದಷ್ಟು ಹಿಟ್ಟನ್ನು ಅಂದು ತರಲೇ ಬೇಕಾಗಿತ್ತು. ಇಲ್ಲವಾದರೆ ಇನ್ನು ಎರಡು ದಿನಗಳು ಬರಿಯ ಹೊಟ್ಟೆಯಲ್ಲಿ ಇರಬೇಕಾಗಿತ್ತು. ಲಕ್ಕಿ ಪೇಟೆ ಬೀದಿಗೆ ಬಂದಳು. ಆ ಅಂಗಡಿಯ ಬಳಿ ೪೦೦ ೫೦೦ ಜನರು ಸುತ್ತುಗಟ್ಟಿದ್ದರು. ಆಕಾಶವೇ ಕಳಿಚಿ ಬಿದ್ದಂತಾಯಿತು ಲಕ್ಕಿಗೆ. ಅದೇ ರಸ್ತೆಯಲ್ಲಿ ಇನ್ನೊಂದು ಅಂಗಡಿಗೆ ಹೋದಳು. ಆದರೆ ಅಲ್ಲಿಯ ಪರಿಸ್ಥಿತಿ ತೀರ ಕಠಿಣವಾಗಿತ್ತು. ವಿಪರೀತವಾದ ಜನ, ನುಗ್ಗಲು ಪುನಃ ಹಿಂದಿನ ಅಂಗಡಿಯ ಕಡೆಗೆ ಧಾವಿಸಿದಳು. ಆಗಲೇ ೧೦ ಹೊಡೆಯಿತು. ಇನ್ನೂ ಸುಮಾರು ೬೦೦ ಜನರು ಹಿಟ್ಟನ್ನು ಕೊಳ್ಳಬೇಕಾಗಿತ್ತು. ಆದರೂ ಜನರು ತಂಡ ತಂಡವಾಗಿ ಬಂದು ಸೇರುತ್ತಲೇ ಇದ್ದರು. ಆ ನೂಕು ನುಗ್ಗಲಿನ ಮಧ್ಯೆ ಮಲಗಿದ್ದ ಮಗು ಎಚ್ಚತ್ತು ಅಳಲಾರಂಭಿಸಿತು. ಅದನ್ನು ಸಮಾಧಾನ ಮಾಡುವುದರಲ್ಲಿಯೇ ಹನ್ನೊಂದು ಗಂಟೆ ಆಗಿ ಹೋಯ್ತು. ಇಷ್ಟಾದರೂ ಲಕ್ಕಿ ಆ ಸಾಲಿನಲ್ಲಿ ೪೬೦ನೆಯವಳು—೧೨ ಗಂಟೆ ಬಡಿಯಿತು. ಲಕ್ಕಿ ೪೧೦ನೆಯವಳು—ಕಾರ್ಖಾನೆ ೧ ಗಂಟೆ ಕೂಗಿತು. ೩೨೦ನೆಯವಳಿನ್ನೂ, ಅಯ್ಯೋ ಅವಳಿಗೆ ಹಿಟ್ಟು ದೊರೆಯುವುದೋ ಇಲ್ಲವೋ, ಪಾಪ! "ಒಬ್ಬೊಬ್ರು ಕೊಂಡ್ಕೊಳ್ಳೋಕೆ ಏಸ್

ಗಂಟೆ ತಗೋತಾರೆ. ಬಿರಬಿರನೆ ತಕಾಬಾರದಾ..........ಈ ಇದ್ದ (ಯುದ್ಧ) ಎಡ್ ಬಡವರನ್ನಂಗಿ ನೀರ್ಕುಡಿಯಾಕ್ಬಂಧೈತೆ, ಹಾಳಾದ್ದು-“ತನ್ನಲ್ಲೇ ಗೊಣಗಿಕೊಂಡಳು, ಲಕ್ಕಿ. ೫ ಗಂಟೆ ಲಕ್ಕಿ ೧೮೦ನೆಯವಳು. ತನಗೆ ಅಂದು ಹಿಟ್ಟು ಸಿಗುವುದೋ ಇಲ್ಲವೋ, ಎಂಬ ಯೋಚನೆ ಹತ್ತಿತು. ಬರಿಗೈಲಿ ಮನೆಗೆ ಹೋದರೆ ಆಗುವ ನಂಜಿನ ಆರ್ಭಟವು ಕಣ್ಣಲ್ಲಿ ಸುಳಿಯಿತು. ತನ್ನ ಜಾಗದಲ್ಲಿ ಒಬ್ಬ ಹುಡುಗನನ್ನು ನಿಲ್ಲಿಸಿ, ತನಗಿಂತ ಸ್ವಲ್ಪ ಮುಂದೆ ಇದ್ದ ಒಬ್ಬ ಮುದುಕಿಯ ಬಳಿಗೆ ಹೋಗಿ—“ಅಜ್ಜಿ, ನಾನ್ ಬೋ ಇಂದೆ ಇದ್ದಿವ್ನಿ ಕಣಜ್ಜೀ, ನನ್ಗಂಡ್ಸು ಚಾಕರಿಯಿಂದ ಬರೋ ಒತ್ತಾಯ್ತು. ದಯಇಟ್ಟು ಒಸಿ ಜಗವ ನನಗ್ಬುಡು ಪುಣ್ಯ ಬತ್ತೈತೆ.” ತಲೆ ನಡಗಿಸುತ್ತಾ ಆ ಮುದುಕಿ—“ಓಹೋ ಬಿಡ್ರವ್ವ ಈ ರಾಣಿಗೆ ಜಗವಾ ನಾನು ಬೈಗ್ನಿಂದ ಕಾದಿವ್ನಿ- ನಿನಗ್ಬಿಟ್ಟು ನಾನೇನ್ ಮಣ್ಣೊಯ್ಯೋಬೇಕಾ?” ತನ್ನ ಸರಿಸಮಾನ ಅಂತಸ್ಥಿನವರೇ ಇಷ್ಟು ನಿರ್ದಯಿಗಳಾಗಿದ್ದಾರಲ್ಲಾ ಎನ್ನಿಸಿತು ಅವಳಿಗೆ, ಅಷ್ಟು ಹೊತ್ತಿಗೆ ಲಕ್ಕಿ ೭೪ನೆಯವಳಾಗಿದ್ದಳು. ಸ್ವಲ್ಪ ಕಾಲದಲ್ಲೇ ಹಿಟ್ಟು ದೊರೆಯುವುದೆಂಬ ಆಸೆ ಮೂಡಿತು. ಆರು ಬಡಿಯಿತು. ಅಂಗಡಿಯನ್ನು ಮುಚ್ಚಲು ಇನ್ನು ಒಂದೇ ಒಂದು ಗಂಟೆ ಉಳಿದಿದೆ. ಆದರೆ ಅವಳು ಕೊಳ್ಳುವುದರಲ್ಲಿಯೇ ಮುಚ್ಚುವರೆ? ಎರಡು ದಿನಗಳಿಂದ ಜೋಪಾನವಾಗಿಟ್ಟವ್ದ ಎರಡಾಣೆ! ಅದರಿಂದ ಅವಳು ಹಿಟ್ಟು ಕೊಳ್ಳದಿದ್ದರೆ ನಿಷ್ಪ್ರಯೋಜನವಾಗುವುದಿಲ್ಲವೆ! ಬರಿಗೈಯಲ್ಲಿ ಹೋದರೆ ನಂಜನು ಸುಮ್ಮನೆ ಬಿಡುವನೆ! ಪಾಪ!! ೬-೩೦. ಆರೂವರೆ ಗಂಟೆ. ಸಾಮಾನನ್ನು ಕೊಡುತಿದ್ದ ಇಬ್ಬರು ವರ್ತಕರು ತಂತಮ್ಮ ಕೋಟುಗಳನ್ನು ಹೆಗಲಿಗೇರಿಸಿಕೊಂಡು ಮನೆಯ ಕಡೆ ಹೊರಟರು. ಕೊಡುವವರು ಕಡಿಮೆಯಾದರೂ, ಕೊಂಡುಕೊಳ್ಳುವವರು ಕಡಿಮೆಯಾಗಿರಲಿಲ್ಲ. ಆದರೆ ಅಷ್ಟರಲ್ಲಿ ೭ ಗಂಟೆಯಾಯ್ತೆಂದರೆ ಲಕ್ಕಿ ಬರಿಯ ಕೈಲಿ ಮನೆಗೆ ತಿರುಗಬೇಕು. ಇನ್ನೊಂದು ಅರ್ಧ ಗಂಟೆ ಇದ್ದಿದ್ದರೆ ಸಾಕಾಗುತ್ತಿತ್ತು. ಬಡವರ ಗೋಳು ಅವರಿಗೆ ಕೇಳಿಸದೆ? ಹೌದು! ಹೊಟ್ಟೆ ತುಂಬಿದವರು ಹಸಿದವರನ್ನು ನೋಡುವುದು ಕಷ್ಟ! ೬—೫೦ ಲಕ್ಕಿ ೨೨ನೆಯವಳು. ೭ ಗಂಟೆ

ಯಾಗಿ ಹೋಯ್ತು. ಲಕ್ಕಿ ಇನ್ನೂ ಗಿಲನೆಯವಳು. ವ್ಯಾಪಾರಿ ಕೈ ಝಾಡಿಸ ತೊಡಗಿದ. ಜಾಗದಿಂದ ಎದ್ದ. ಜವಾನ ಬಾಗಿಲು ಮುಚ್ಚ ಲಾರಂಭಿಸಿದ. ಆರ್ತನಾದದಿಂದ ಕೂಡಿ ೨೦ ಮಂದಿ ಮುಂದೆ ಬಂತು. ಆದರೆ ಆ ಕೂಗು ಅವರಿಗೆ ತಗಲಿಲ್ಲ! ದೀಪ ನಂದಿತು. ಕಬ್ಬಿಣದ ಸಲಾಕೆ ಅಡ್ಡ ಬಂತು. ಎರಡು ದೊಡ್ಡ ಅಲಿಘರ್ ಬೀಗಗಳು ಸಲಾಕೆಯ ಮೇಲೆ ಕುಳಿತವು. ಬಾಗಿಲು ಮುಚ್ಚುವುದರಲ್ಲಿದ್ದ—ಇನ್ನೊಂದು ಅಂಗಡಿಗೆ ಹಸಿದವರ ತಂಡ ಬಂತು. ಅಲ್ಲಿಯ ಮಾಲೀಕ ಎಷ್ಟಾದರೂ ಕರು ಣಾಳು—ಎರಡೆರಡಾಣೆಯನ್ನು ಹೆಚ್ಚಾಗಿ ಕೊಡುವುದಾದರೆ ಹಿಟ್ಟನ್ನು ಕೊಡುವಷ್ಟು ಕೃಪೆ ಮಾಡಿದ. ನಾಲ್ಕು ಆಣೆಯ ಸಾಹುಕಾರರು ಕೆಲ ವರು ಹಾಗೆಯೇ ಕೊಂಡು ವಿಜಯಿಗಳಂತೆ ಸಾಗಿ ಹೋದರು. ಎರಡೇ ಆಣೆ! ಕೇವಲ ಎರಡಾಣೆಯ ಆಸ್ತಿಯುನ್ನುಳ್ಳ ಲಕ್ಕಿಗೆ ಲಂಚ ಕೋರರ ಬಾಯಿಗೆ ಎರಡಾಣೆ ಬಿದ್ದರೆ ಲಕ್ಕಿಯ ಬಾಯಿಗೆ ಮಣ್ಣೇ ಅಲ್ಲವೆ? ಯಾರೂ ಅವಳನ್ನು ಮಾತನಾಡಿಸಲಿಲ್ಲ. ಬರಬರುತ್ತಾ ದೀಪಗಳು ನಂದಿದವು. ಮಡಲಲ್ಲಿದ್ದ ಮಗು ಎಚ್ಚತ್ತಿತು. ಅದರ ಬಾಯಿಗೆ ತನ್ನ ಬತ್ತಿದ ಎದೆಯನ್ನೊಡ್ಡಿ ಲಕ್ಕಿ ಮನೆಯ ಹಾದಿಯನ್ನು ನಿಧಾನವಾಗಿ ತುಳಿಯ ತೊಡಗಿದಳು.

೨

ಲಕ್ಕಿ ಮನೆ ಸೇರಿದಾಗ 8½ ಗಂಟೆ. ನಂಜಪ್ಪ ಬೀಗ ಹಾಕಿದ್ದ ಮನೆಯ ಮುಂದೆ ಹಸಿದ ಹುಲಿಯ ಹಾಗೆ ಕಾದು ಕೊಂಡಿದ್ದ. "ಎಲ್ಲೇ ಹೊಗಿದ್ದೆ ಈಟೊತ್ತು ಯಾರತ್ರೋ ಅರಟೆ ಕೊಚ್ಕೊಂಡು ಕುಂತಿದ್ಯಲ್ಲಾ. ಓಗ್ಲಿ. ಬಿರ್ನೆ ಕದತೆಗಿ" ಎಂದ. ಲಕ್ಕಿ ಪುರು ಮಾತಾಡದೆ ಬಾಗಿಲು ತೆರೆ ದಳು. ಹರಿದ ಚಿಂದಿಯ ಮೇಲೆ ಹೆಗಲಿನ ಮೇಲೆ ನಿದ್ರಿಸುತ್ತಿದ್ದ ಮಗು ವನ್ನು ಮಲಗಿಸಿದಳು. ಮೋಟು ಗೋಡೆಯ ಮೇಲೆ ಇದ್ದ ಹರಳೆಣ್ಣೆ ದೀಪವನ್ನು ಹಚ್ಚಿದಳು. ಪ್ರತಿ ಕ್ಷಣದಲ್ಲಿಯೂ ನಂಜಪ್ಪನಿಂದ ಯಾವ ರೀತಿಯ ಪ್ರಶ್ನೆ ಬರುವುದೋ ಎಂದು ನಿರೀಕ್ಷಿಸುತ್ತಿದ್ದಳು. ನಂಜ ಕೋಟು ಅಂಗಿ ಬಿಚ್ಚಿ ಕೈಕಾಲು ತೊಳೆದುಕೊಂಡು "ಇಕ್ಕು ಮುದ್ದೇನ ಇವತ್ತು ಬಹಳ ಅಸ್ವೆ ಆಗೈತೆ" ಎಂದ. ಲಕ್ಕಿ ಅಲುಗಲಿಲ್ಲ. ನಂಜನಿಗೆ ತಡೆಯ

ಲಾಗಲಿಲ್ಲ. "ನಿನಗೇನ್ ಬಂತೇ ಧಾಡೀ" ಎಂದು ಲಕ್ಕಿಯನ್ನು ತಳಿ ತಾನೇ ಮುದ್ದೆ ತರಲು ಒಳಹೊಕ್ಕ. ಆದರೆ ಅಲ್ಲಿದ್ದುದು ಬರಿಯ ಮಡಕೆ. "ಯಾಕೆ ಮುದ್ದೆ ಬೇಯ್ಸಿಲ್ಲಿಲ್ಲಾ" ಲಕ್ಕಿಗೆ ತಡೆಯಲಾಗಲಿಲ್ಲ. ನಂಜನ ಕಾಲ್ಗಳ ಮೇಲೆ ಬಿದ್ದು ಅಳುತ್ತಾ ಎಲ್ಲವನ್ನೂ ಹೇಳಿದಳು. ನಂಜನಿಗೆ ಮುಖ ಕೆಂಪೇರಿತು. ಅವನು ಅಂಗಡಿಯುವನನ್ನು ನಿಂದಿಸಿದ! ಜಗತ್ತನ್ನೇ ಕಬಳಿಸಲು ಬಂದಿರುವ ರುದ್ರ ಸಮರವನ್ನು ಹಳಿದ!! ಬೆನ್ನು ಬಿಡದ ಬಡತನವೆಂಬ ಭೂತವನ್ನು ಬೈದ!!! ಆದರೆ! ಅವನ ಕೋಪವು ಅವನ ಹಸಿವೆಯನ್ನು ಶಾಂತಗೊಳಿಸಲಿಲ್ಲ. ಕೋಪದ ಭರದಲ್ಲಿ ಹಸಿವೆಯ ತೀವ್ರತೆಯು ಇನ್ನೂ ಹೆಚ್ಚಾಯ್ತು. ಒಡಲುರಿಯಿತು. ಹಿಟ್ಟನ್ನುಕೊಂಡು ತರಲು ಯೋಚಿಸಿದ. ನಿರಾಶೆ ಮತ್ತು ನಿರಾಹಾರಗಳು ಅವನನ್ನು ಬಹು ವಾಗಿ ಅಶಕ್ತನನ್ನಾಗಿ ಮಾಡಿದುವು. ಹೊಟ್ಟೆಯ ತುಂಬ ನೀರು ಕುಡಿದು ಹಾಗೆಯೇ ಮಲಗಿದ. ಮಲಗಿದ್ದ ಮಗು ಎಚ್ಚೆತ್ತು ಅಳ ತೊಡಗಿತು. ಲಕ್ಕಿ ತನ್ನೆದೆಯನ್ನು ಚಾಚಿದಳು. ಮಳೆಯಿಲ್ಲದೇ ಬೆಳೆಯೇ? ನಿರಾ ಹಾರಿಯಾದ ಶುಷ್ಕ ಎದೆಯು ಮಗುವಿನ ಹಸಿವೆಯನ್ನು ಶಾಂತಗೊಳಿ ಸೀತೆ? ಮಗುವು ಅಳುವನ್ನು ನಿಲ್ಲಿಸಲಿಲ್ಲ. ಮಗುವಿನ ರೋದನ ಧ್ವನಿಯು ನಂಜನ ಹೃದಯದ ತೀವ್ರತೆಯನ್ನು ವೃದ್ಧಿಗೊಳಿಸಿತು. "ಮಗೂನ್ ಯಾಕೆ ಅಂಗಳಸ್ತೀಯ" ಎಂದ ನಂಜ. ಇದಕ್ಕೆ ಲಕ್ಕಿಯ ಮೆಲುದನಿಯ ಉತ್ತರ–"ನಾನೇನ್ ಮಾಡಲಿ"–ನಂಜ ಆ ಮಾತಿನ ಅರ್ಥವನ್ನರಿತ. ಉದ್ವೇಗ ಹೆಚ್ಚಾಯ್ತು. ಮಲಗಿದ್ದವನು ಎದ್ದ. "ಈಗೊಂದ್ಗಾಸಿಗೆ ಬಂದ್ಬಿಡ್ತಿನ್ನಿ" ಎಂದ ಲಕ್ಕಿಗೆ ಆಶ್ಚರ್ಯವಾಯ್ತು. ಬಾಗಿಲನ್ನು ಮುಂದೆ ಮಾಡಿಕೊಂಡು ನಂಜ ಹೊರಟೇ ಹೋದ.

ಪಕ್ಕದ ರಸ್ತೆಯಲ್ಲಿಯೇ ಒಂದು ರೊಟ್ಟಿ ಅಂಗಡಿ [Bread) ಅಲ್ಲಿ ಗಲಾಟೆ ಇತ್ತು. ಆ ಅಂಗಡಿಗೆ ಹತ್ತಿದಂತೆ ಒಂದು ಮೂಲೆ. ಆ ಮೂಲೆಯಲ್ಲಿ ಅಡಗಿ ಕುಳಿತ. ಸಮಯವನ್ನು ಎದುರು ನೋಡುತ್ತಿದ್ದ. ಒಂದು ದೊಡ್ಡ ಬ್ರೆಡ್ಡಿನ ಪ್ಯಾಕೆಟ್ಟನ್ನು ಸೆಳೆದುಕೊಂಡು ಹೋದ. ಮಾಲೀಕ ಕೂಗಿಕೊಂಡನು. ಜನರು ಸೇರಿದರು. ಕೆಲವರು ಅವನ ಹಿಂದೆ ಓಡಿದರು. ಹತ್ತಿರದಲ್ಲಿ ಬೀಟು ಮಾಡುತ್ತಿದ್ದ ಕಾನ್‌ಸ್ಟೇಬಲ್

ಒಬ್ಬ ಬಂದು ಸೇರಿದನು. ನಂಜನಿಗೆ ಲಕ್ಕಿ ಹೇಳಿದ 'ನಾನೇನ್ ಮಾಡಲಿ' ಎಂಬುದು ಕಿವಿಯಲ್ಲಿ ಪ್ರತಿಧ್ವನಿಸುತ್ತಿತ್ತು. ದಾರಿಯ ಪರಿವೆ ಇಲ್ಲದೆ ಓಡುತ್ತಿದ್ದ. ಎದುರುಗಡೆ ನಾಯಿಯೊಂದು ಬೊಗಳುತ್ತಾ ಬಂತು. ನಂಜ ಕಲ್ಲೊಂದನ್ನು ಎಡವಿ ಬಿದ್ದನು. ಕಾನ್‌ಸ್ಟೇಬಲ್ ಬಂದು ಅವನನ್ನು ಹಿಡಿದು ಎತ್ತಿದನು. ಬಾಯಿಯಿಂದ ರಕ್ತ ಸೋರು ತ್ತಿತ್ತು. ಪ್ರಜ್ಞೆ ಇರಲಿಲ್ಲ.

ಆಗ ರಾತ್ರಿ ೧೧ ಗಂಟೆ. ಗುಂಪು ಪೋಲೀಸ್ ಸ್ಟೇಷನ್ ಸೇರಿತು. ತೂಕಡಿಸುತ್ತಿದ್ದ ಜಮಾದಾರ್ ಎದ್ದು ಕುಳಿತ. ಅವನೆದುರಿನಲ್ಲಿ ನಂಜ ಲಾಠಿ ಪ್ರಯೋಗಕ್ಕೆ ಒಳಗಾದ. ಗಾಯದ ಮೇಲೆ ಬರೆ ಹಾಕುವುದು ನಮ್ಮ ಸಮಾಜದ ನೀತಿ! ಬಡತನದ ಬೇನೆಯಿಂದ ನೊಂದು (ಅ) ಕಾರ್ಯವನ್ನು ಮಾಡಿದ ನಂಜಧರ್ಮ ಪ್ರಭುವಿನ ಎದುರುಗಡೆ ನ್ಯಾಯ ವಂತ, ನಿರಪರಾಧಿ; ಮಾನವೀಯತೆಯನ್ನರಿಯದ, ಭೋಗಲಾಲಸೆಯಲ್ಲಿ ಲಿಪ್ತರಾದ (ಅ) ಧರ್ಮ ಪ್ರಭುವಿನೆದುರಿನಲ್ಲಿ ಅವನು ಪರಮ ಅನ್ಯಾಯಿ, ಪ್ರಜಾದ್ರೋಹಿ. ಬೇಲಿಯೇ ಎದ್ದು ಹೊಲ ಮೇಯ್ದಂತೆ, ತಾಯಿಯೇ ಮಗುವಿಗೆ ವಿಷ ನೀಡಿದಂತೆ, ಸಮಾಜವೇ ಇಂತಹ ಕ್ರೂರ ಕೃತ್ಯವನ್ನೆ ಸಗುತ್ತಿರುವಲ್ಲಿ ನಂಜನ ತಪ್ಪು ಒಂದು ದೊಡ್ಡ ತಪ್ಪೇ? ಸಮಾಜವು ತನ್ನ ಜನರಿಗೆ ಸರಿಯಾಗಿ ಅನುಕೂಲತೆಗಳನ್ನು ಕಲ್ಪಿಸಿ ಕೊಟ್ಟಿದ್ದರೆ ಇಂತಹ ಕಾರ್ಯಗಳಿಗೆ ಎಡೆಯೆಲ್ಲಿತ್ತು? ಸಮಾಜವು ಅನುಕೂಲವನ್ನು ಕಲ್ಪಿಸಿ ಕೊಟ್ಟಿದೆ! ಆದರೆ ಅದು ಬಡವರ ಉದ್ಧಾರಕ್ಕಲ್ಲ! ದೊಡ್ಡವರ, ಸಿರಿವಂತರ ಬೊಜ್ಜು ಬೆಳೆಸುವುದಕ್ಕಾಗಿ!! ಅಸ್ತು! ಅಂತು ನಂಜ ಅಪ ರಾಧಿ ಎಂದು ತೀರ್ಮಾನವಾಯಿತು. ಜೈಲಿನ ೩ನೇ ನಂಬರ್ ಕೋಣೆ ಯಲ್ಲಿ ಬಂಧಿತನಾದನು. ಇಹಲೋಕದ ನ್ಯಾಯನಿಷ್ಟರು ಈ ಪ್ರಜಾ ದ್ರೋಹಿಗೆ ನ್ಯಾಯವಾಗಿ ಯಾವ ವಿಧವಾದ ಶಿಕ್ಷೆಯನ್ನು ವಿಧಿಸಬೇಕೆಂದು ತಮ್ಮ ಕಡತಗಳನ್ನು ಹುಡುಕಿ ಹುಡುಕಿ ಬೇಸರ ಪಡುವ ಕಷ್ಟವನ್ನು ತಪ್ಪಿಸಲೆಂದೋ ಏನೋ ಬೆಳಗಾಗುವುದರೊಳಗಾಗಿ ನಂಜ ಪರಲೋಕದ ಹಾದಿಯನ್ನು ಹಿಡಿದಿದ್ದನು. ಮನೆಯಲ್ಲಿ ತಾಯಿ ಮಕ್ಕಳಿಬ್ಬರು ಅಂತ್ಯ ರಹಿತ ನಿದ್ರಾವಸ್ಥೆಯಲ್ಲಿದ್ದರು.

---

೨

# ಒಂದೇ ಮಣ್ಣು

—ಮೊದಲನೇ ದೃಶ್ಯ—

(ಕ್ವೆಟ್ಟಾ ನಗರದ ರಸ್ತೆಯೊಂದರಲ್ಲಿ ಎರಡಂತಸ್ತಿನ ಮನೆ, ಕೆಳಗಡೆಯಲ್ಲಿ ಆಗತಾನೆ ಕ್ಲಬ್ಬಿನಿಂದ ಬಂದ ನಸೀರುದ್ದೀನನೂ, ಮಹಮುದ್ ಅಕರಂನೂ ಮಾತನಾಡುತ್ತಾ ಕುಳಿತಿದ್ದಾರೆ. ಕುಡಿದು ಮುಗಿಸಿದ ಟೀ ಬಟ್ಟಲುಗಳು ಮೇಜಿನ ಮೇಲೆಯೇ ಇವೆ. ಅವರು ಮಾತನಾಡುವುದರಲ್ಲಿ ಇಬ್ಬರಿಗೂ ಯಾವುದೋ ಒಂದು ವಿಷಯವಾಗಿ ದ್ವಿಮತವಾಗಿದೆಯೆಂದು ಕಾಣಬರುತ್ತಿದೆ. ಸಾಯಂಕಾಲ 6 ಗಂಟೆ ಸಮಯ.)

ನಸೀರ:- ಆದರೆ ಇಷ್ಟು ಚಿಂತೆ ಏತಕ್ಕೆ? ನೀನು ಈಗಿನ Muslim politics ನ ಚೆನ್ನಾಗಿ ತಿಳಿಕೊಂಡಿಲ್ಲ. ಅಂತ ನನಗೆ ತೋಚುತ್ತೆ.

ಮಹಮುದ್:- ಈಗಿನ ಮುಸ್ಲಿಂ ಪಾಲಿಟಿಕ್ಸ್ ತಿಳಿಯೋದ್ಕಿಂತ ಬಿಡೋದು ಲೇಸು.

ನಸೀರ:- ಹಾಗಾದರೆ ನೀನು Pledge ಗೆ ಸಹಿ ಮಾಡೋದಿಲ್ಲಾ........!

ಮಹಮುದ್:- ಸಾಕು! ನಾನೇನೊ ಮುಸಲ್ಮಾನ್. ಆದರೆ ನಾನು ಇತರರನ್ನು ತಿರಸ್ಕಾರ ಮಾಡಲಾರೆ. ನಾವಿಬ್ಬರೂ ಒಂದೇ ದೇಶದಲ್ಲಿ ವಾಸಿಸುತ್ತಿರುವವರು. ನಮ್ಮಿಬ್ಬರಲ್ಲೂ ಪರಸ್ಪರ ಬಹಳ ಸ್ನೇಹವಿದೆ. ಹೀಗಿರುವಾಗ ಸ್ವದೇಶಿ ಮಾಲನ್ನು ಬಿಟ್ಟು ವಿಲಾಯಿತಿ ಮಾಲನ್ನು ಕೊಳ್ಳುವುದೇ! ಹಿಂದೂವಿನ ಬಳಿ ವ್ಯಾಪಾರ ಮಾಡುವುದರ ಬದಲು ಮುಸಲ್ಮಾನನ ಬಳಿಯೇ ಮಾಡು ಎಂದು ನೀನು ಹೇಳುತ್ತಿರುವೆ. ಇದು ನನ್ನಿಂದ ಸಾಧ್ಯವಿಲ್ಲ. ಈ ಯೋಜನೆ ದೇಶದ ಹಾನಿಗೆ ಕಾರಣವಲ್ಲದೆ ಉನ್ನತಿಗೆ ಎಂದಿಗೂ ಕಾರಣವಾಗಲಾರದು.

ನಸೀರ:- ಸರ್ಕಾರದವರು ನಮಗೆ Community award ಮೂಲಕ ಮೆಹರ್ಬಾನಿ ತೋರಿಸಿದ್ದಾರೆ ಅನ್ನೋದು ನಿನಗೆ ಗೊತ್ತೇ ಇಲ್ಲ! ಅದಕ್ಕಾಗಿ ಕೃತಜ್ಞರಾಗಿರಬೇಕೋ ಬೇಡ್ವೋ?

ಮಹಮದ್:- ಯಾವುದಾದರೂ ಒಂದು ಜಾತಿಯು ಹೊಟ್ಟೆ ತುಂಬಿ ಹೋದರೆ, ಅಥವಾ ಒಂದು ಪಂಗಡ ಜನರು ಸುಖಿಗಳಾದರೆ, ವಿಶ್ವಶಾಂತಿ ದೊರಕಿದಂತಾಯಿತೇನು?

ನಸೀರ:- ಅಯ್ಯೋ ಮಂಕೆ! ಇನ್ನೊಬ್ಬರಿಗೆ ಸಹಾಯವಾಗಲಿ, ಇಲ್ಲದೇ ಇರಲಿ, ಅದನ್ನು ಕಟ್ಟಿಕೊಂಡು ನಾವೇನು ಮಾಡೋಣ? ಅದರಿಂದ ನಮಗೆ ಹಿತವಾಗುತ್ತೊ ಇಲ್ಲವೋ ಸಾಕು.

ಮಹಮದ್:- ಹಾಗೆ ಒಂದು ಕೋಮುವಾರು ಅಥವಾ ಒಂದು ಜಾತಿಗೆ ಹಿತವಾಗುವುದಾದರೆ ಅದಕ್ಕೆ ನನ್ನ ಧಿಕ್ಕಾರ!

ನಸೀರ್:- ನಿನ್ನಂಥ Pro—Hindu—Muslim ಗೆ ನನ್ನ ತಿರಸ್ಕಾರ!

ಮಹಮದ್:- ನೀನು ಏನಾದರೂ ಹೇಳು.. ನಾನು ಖಂಡಿತ ವಾಗಿಯೂ ಅಂತಹ ನೀತಿಯನ್ನು ಒಪ್ಪುವುದಿಲ್ಲ.

ನಸೀರ:- ಆ ದಿನ ಈ ವಿಷಯವಾಗಿಯೇ ಖಾಜಿಗಳು ಮಾತ ನಾಡುತ್ತಿದ್ದರು. ಅವರು— ಹಿಂದೂಸ್ಥಾನದ ಮುಸಲ್ಮಾನರ Oppertunists ಆಗಿದ್ದಾರೆ. ಆದ್ದರಿಂದ ಇಂತಹ ಸದವಕಾಶದಲ್ಲಿ ಲಾಭಹೊಂದಬೇಕು. ಮುಸಲ್ಮಾನರ ಅಧಿಕಾರ ಚಲಾವಣೆ ಎಲ್ಲಿಯ ವರೆಗಿರುತ್ತದೆಯೋ ಅಲ್ಲಿಯವರೆಗೆ ಹಿಂದೂಸ್ಥಾನದಲ್ಲಿ ಪ್ರೀತಿ ಇರುವುದು. ಈಗ ನಾವು ಸುಧಾರಿಸದೆ ಹೋದರೆ ಮುಂದೆ ಹಿಂದೂಗಳು ನಮ್ಮ ದಾರಿಗೆ ಅಡ್ಡ ಬರುವರು—ಎಂದು ಅಭಿಪ್ರಾಯ ಪಟ್ಟರಯ್ಯಾ!

ಮಹಮದ್:- ಅಯ್ಯೋ! ಈ ಮಾತಿನಲ್ಲಿ ನಂಬಿಕೆ ಏನಿದೆ? ಯಾವಾಗ ನಿನ್ನ ಸ್ವದೇಶದ ಮೇಲೆ ಪ್ರೀತಿ ಯಿಲ್ಲವೋ ಆಗ ನೀನು ಏನು ಮಾಡುವುದಕ್ಕೂ ಸಾಧ್ಯವಿಲ್ಲ. ಇಂತಹ ಪಾಖಂಡಿಗಳೇ ದೇಶವನ್ನು ಗುಲಾಮಗಿರಿಯಲ್ಲಿ ಸಿಕ್ಕಿಸಿರುವುದು. ನನ್ನ ದೃಷ್ಟಿಯಲ್ಲಿ ಈ ವಿಧವಾದ ಭೇದ ಭಾವವೇ ತಪ್ಪು. ನಮ್ಮಿಂದಲೇ ಹಿಂದೂಸ್ಥಾನ ಮುಂದೆ ಬರ ಬಾರದೇನು? ಆದರೆ ನಿಜವಾದ ಕರ್ತವ್ಯವೇನೆಂದರೆ ನಾವು ಹಿಂದೂ ಮುಸಲ್ಮಾನರು ಸೇರಿಕೊಂಡು ದೇಶವನ್ನುದ್ಧರಿಸೋಣ. ತೆರೆದ ಹೃದಯ ದಿಂದಸ್ವಾಗತಿಸಿದರೆ ಹಿಂದುಗಳೇನು ನಮ್ಮ ಮೈತ್ರಿಗೆ ಹಿಂಜರಿಯುವುದಿಲ್ಲ.

ಈಗ ನಡೆಯುತ್ತಿರುವ ಸ್ವಾತಂತ್ರ ಸಂಗ್ರಾಮವು ಕೊನೆಗಾಣುವ ಸಂಧಿ ಸಂಭವಿಸಿದರೆ, ಬರಿಯ ಹಿಂದುಗಳ ಕೈಗೇನು ಬರುವುದು ಭಾರತದ ಅಧಿಕಾರ ಸೂತ್ರ? ಅದು ಅಸಂಭವ. ಹಿಂದೂಗಳು ತಮ್ಮ ಧರ್ಮಕ್ಕಾಗಿಯಲ್ಲ, ದೇಶಕ್ಕಾಗಿ ಈಗ ಹೋರಾಡುತ್ತಿದ್ದಾರೆ. ಅವರು ಸ್ವದೇಶ ಸಂರಕ್ಷಣೆಗಾಗಿ, ಮುಸ್ಲಿಮರು ಇದು ತಮ್ಮ ದೇಶವೆಂದು ತಿಳಿದುಕೊಂಡು, ನಮ್ಮೊಡನೆ ಸಹಕರಿಸಲಿ ಎನ್ನುತ್ತಿದ್ದಾರೆ. ಇಬ್ಬರು ಸಹೋದರರು ಒಂದೇ ಮನೆಯಲ್ಲಿ ಕುಳಿತು ಒಂದು ರೊಟ್ಟಿಯನ್ನು ತಿನ್ನುವುದಿಲ್ಲವೇನು?

ನಸೀರ:— ಮಹಮದ್! ನನಗೆ ನಿನ್ನ ಈ ಮಾತುಗಳೆಲ್ಲಾ ಸರಿಯಾಗಿ ಕಾಣುವುದಿಲ್ಲ. ನೀನು ದೀನರಿಗೆ ದುಷ್ಟನಂತೆ ಇದ್ದೀಯೆ! (ಮೇಜಿನ ಮೇಲೆ ಗುದ್ದಿ) ನಾನು ನಿಶ್ಚಯವಾಗಿ ಹೇಳುತ್ತೇನೆ. ಎದೆ ತಟ್ಟಿ ಹೇಳುತ್ತೇನೆ. ಹಿಂದೂ ಮುಸ್ಲಿಮರ ಮೈತ್ರಿ ಸಾಧ್ಯವಿಲ್ಲ. ನಾವು ಹಿಂದೂಸ್ಥಾನದಲ್ಲಿ ಸರ್ಪದ ಹೆಡೆ ನೆರಳಿನಲ್ಲಿ ಕುಳಿತು ಕೊಂಡಿರುವ ಕಪ್ಪೆಯಂತೆ ಇದ್ದೇವೆ. ಸಮಯ ಸಿಕ್ಕಿತೆಂದರೆ ಹಿಂದೂಗಳು ನಮ್ಮನ್ನು ನುಂಗಿಬಿಡುತ್ತಾರೆ. ಈಗ ಸರಕಾರವೂ ಅವರ ಸಹವಾಸ ಬಿಡಿ ಎನ್ನುತ್ತಿದೆ. ನಮ್ಮ ನಾಯಕರೂ ಹೇಳುತ್ತಿದ್ದಾರೆ. ನೀನೊಬ್ಬ ಸ್ವಮತ ದ್ವೇಷಿ! ಆದಕ್ಕೇ ಒತ್ತಾಸೆಯನ್ನೇ ಕೊಡುವುದಿಲ್ಲ. ನಾನಂತೂ ಹಿಂದೂ ಮುಸ್ಲಿಮರು ಒಂದಾಗ ಬೇಕೆಂದು ವಾದಿಸುವವನಲ್ಲ.

ಮಹಮದ್:– (ಏಳುತ್ತ) ಆದರೆ ನಾನೆಂದಿಗೂ ಇದಕ್ಕೆ ಒತ್ತಾಸೆ ಕೊಡಲಾರೆ. ಇದು ನಾಶ ಹೊಂದುವುದರ ದ್ಯೋತಕವಾಗಿದೆ. ಹೋಗುತ್ತೇನೆ—ಸಲಾಂ.

(ಹೊರಗಡೆ ಯಾರೋ ಕರೆದ ಧ್ವನಿ. ಜವಾನನೊಬ್ಬನು ಓಡಿ ಬರುತ್ತಾನೆ).

ಜವಾನ:— ಜನಾಬ್. ಹೊರಗಡೆ ಯಾರೋ ಒಬ್ಬರು ಬಂದಿದ್ದಾರೆ. (ಮಹಮ್ಮದನ ಕಡೆ ನೋಡುತ್ತಾ) ತಮ್ಮನ್ನು ಕರೆಯುತ್ತಿದ್ದಾರೆ.

ಮಹಮದ್:—ಯಾರು? ಅವರನ್ನು ಒಳಗೆ ಕರೆದುಕೊಂಡುಬಾ.

(ಜವಾನ ಹೊರಗಡೆ ಹೋಗುತ್ತಾನೆ. ಆ ಮನುಷ್ಯ ಒಳಗಡೆ ಬರುತ್ತಾನೆ. Urdu form ಮುಚ್ಚಿಡಲ್ಪಡುತ್ತದೆ.)

ಹೊಸ ಮನುಷ್ಯ:— ಓಹೋ! ತಾವು ಇಲ್ಲಿ ಕುಳಿತಿದ್ದೀರಿ. ಮನೆಯ ಹತ್ತಿರ ತಮ್ಮನ್ನು ಕಾದು ಕಾದು ಸಾಕಾಗಿ ಹೋಯ್ತು.

ಮಹಮದ್:—ಕ್ಷಮಿಸಿರಿ. ನನಗೆ ಸ್ವಲ್ಪ ಕೆಲಸವಿತ್ತು. ನಸೀರ್ ಭಾಯಿ! ನಿನಗೆ ಇವರು ಯಾರೆಂದು ಗೊತ್ತೇನು? ಇವರು ನನ್ನ ಸ್ನೇಹಿತರಾದ ಜ್ಞಾನಚಂದರು.

ನಸೀರ:— (ಅವಸರದಿಂದ) ತಮ್ಮನ್ನು ನೋಡಿ ಸಂತೋಷವಾಯ್ತು.

ಜ್ಞಾನ:— ಸಂತೋಷ! ಮಹಮದ್ ಭಾಯಿಯ ದೆಸೆಯಿಂದ ತಮ್ಮ ಭೇಟಿಯಾದಂತಾಯ್ತು. ಇವರ ಮನೆಯ ಬಳಿ ನಿಮ್ಮ ಮನೆಯು ಹತ್ತಿರ ಇರಬಹುದೆಂದು ತಿಳಿಯಬಂತು. ಅದಕ್ಕಾಗಿ ಇವರ ಜವಾನನ ಜೊತೆಯಲ್ಲಿ ಇಲ್ಲಿಗೆ ಬಂದೆ.

ಮಹಮದ್:— ಏನು ಸಮಾಚಾರ! ಹೇಳಿ.

ಜ್ಞಾನ:— ಸಮಾಚಾರ ಏನು! ಇವತ್ತು ಆ ಮಾವಿನ ಹಣ್ಣಿನ ವ್ಯಾಪಾರಸ್ಥರಾದ ಮುಸಲ್ಮಾನರ ಹತ್ತಿರ ಮಾತನಾಡಲು ಹೋಗಿದ್ದೆ. ನಿಜವಾಗಿ, ಪಾಪ! ಅವರ ಮೇಲೆ ಮುನಿಸಿಪಾಲಿಟಿಯವರು ಬಹಳ ದಂಡ ಹಾಕಿದ್ದಾರೆ. ಎಕ್ಸಿಕ್ಯೂಟಿವ್ ಆಫೀಸರನ್ನು ಸ್ವತಃ ಕಾಣುವುದು ಒಳ್ಳೆಯದೆಂದು.

ನಸೀರ:— ಏನು ವಿಷಯ ನಾನೂ ತಿಳಿದುಕೊಳ್ಳಬಹುದಲ್ಲವೆ!

ಜ್ಞಾನ:— ಏನೂ ಇಲ್ಲ. ಅದೇ ಆ ಮಾವಿನ ಹಣ್ಣಿನ ಮುಸಲ್ಮಾನರ ಮೇಲೆ ಮುನಿಸಿಪಾಲಿಟಿಯವರು ಬಹಳ ತೆರಿಗೆ ಹಾಕಿದ್ದಾರೆ. ಬಹುತೇಕ ಅವರಲ್ಲಿ ಎಲ್ಲರೂ ಪಾಪ! ಬಡವರು. ಪ್ರತಿದಿನ ಬರುವ ನಾಲ್ಕು ಕಾಸಿನಿಂದ ಅವರು ಹೊಟ್ಟೆ ತುಂಬಿ ಕೊಳ್ಳಬೇಕು. ಈ ವಿಷಯ ಹಿಂದೆ ಎಷ್ಟೋ ಬಾರಿ ಮಹಮ್ಮದ್‌ರ ಕಿವಿಗೆ ಹಾಕಿದೆ. ಆದರೆ ಕ್ವೆಟ್ಟಾದ ಗೋಶಾಲೆಯಲ್ಲಿ ನಡೆಯುವ ಗೋಹತ್ಯಾದಿಗಳನ್ನು ತಡೆಯುವುದಕ್ಕಾಗಿ ಒಂದು ಸಂರಕ್ಷಣ ಸಮಿತಿಯನ್ನು ಸ್ಥಾಪಿಸುವ ಸಲುವಾಗಿ ಪ್ರಯತ್ನ

ಮಾಡುತ್ತಿರುವ ಅವರಿಗೆ ನನ್ನ ಮಾತು ಕಿವಿಗೆ ಬೀಳುವುದೇ ಇಲ್ಲ. ಈ ಎರಡು ಸಂಗತಿಗಳೂ ಪ್ರಾಮುಖ್ಯವಾದವುಗಳೇ!

(ಹೊರಗಿನಿಂದ ಯಾರೋ ಕೂಗಿದ ಶಬ್ದ)

ನಸೀರ:— ಆರೆ! ಹೊರಗಡೆ ಯಾರಿದ್ದೀರಾ? (ಜವಾನನು 'ಸ್ವಾಮಿ' ಎಂದು ಬರುವನು) ಯಾರು ನೋಡು ಹೊರಗಡೆ?

(ಜವಾನನು ಹೊರಗಡೆಯಿಂದ ಬಂದು)

ಜವಾನ:— ಸರಕಾರ್, ಯಾರೋ ಇಬ್ಬರು ಈ ಬಾಬುಗಳನ್ನು ಕರೆಯುತ್ತಿರುವರು.

ಜ್ಞಾನಚಂದ:— ನನಗೇ!

ಜವಾನ:— ಹೌದು.........ಸ್ವಾಮಿ!

ಜ್ಞಾನ:— ಇದೇ, ಮಾವಿನ ಹಣ್ಣಿನ ವ್ಯಾಪಾರಗಾರರ ಕಡೆಯವರಿರಬಹುದು. ಒಳ್ಳೇದು ಕರೆದುಕೊಂಡು ಬಾ ಅವರನ್ನು.

ನಸೀರ:— ಹೂ, ಕರೆ. ಏನು ವಿಚಾರ.... (ಇಬ್ಬರು ಹೊರಗಡೆಯಿಂದ ಬಂದು ವಂದಿಸಿ ಒಂದುಕಡೆ ನಿಲ್ಲುವರು) ಬನ್ನೀ, ಬಿರಾದರ್, ಈ ಕುರ್ಚಿಗಳ ಮೇಲೆ. (ಅವರಿಬ್ಬರೂ ನಸೀರುದ್ದೀನನ್ನು ದಿಟ್ಟಿಸಿ ನೋಡುತ್ತಾ ಹೋಗಿ ಕುಳಿತುಕೊಳ್ಳುವರು)

ಜ್ಞಾನ:— ಒಳ್ಳೆಯದು. ತಾವು ಬಂದಿರಲ್ಲ!

ಇಬ್ಬರೂ:— ಹೌದು, ಬಾಬುಗಳೇ, ನಿಮಗಾಗಿ ಕ್ವೆಟ್ಟಾವನ್ನೆಲ್ಲಾ ಹುಡುಕಿದ್ದಾಯ್ತು ನಡೆಯಿರಿ.

ಜ್ಞಾನ:— ಎಲ್ಲಿ. ಹೋಗೋಣ. ಈ ನಸೀರುದ್ದೀನ ಸಾಹೇಬರನ್ನು ಕರೆದುಕೊಂಡು ಹೋಗೋಣ ಜೊತೆಗೆ.

ನಸೀರ:— (ಆತ್ಮಗತ) ನಾನೇನು ಸ್ವಪ್ನಾವಸ್ಥೆಯಲ್ಲಿದ್ದೇನೆಯೋ? ಇವರೂ ಒಳ್ಳೇ ವಿಚಿತ್ರ ಮನುಷ್ಯರು. ಮುಸಲ್ಮಾನರ ಹಿತಕ್ಕಾಗಿ ಸಾಧಿಸುತ್ತಿರುವ ಈ ಬಾಬುಗಳು. ಅತ್ತ ಹಿಂದುಗಳ ಹಿತಕ್ಕಾಗಿ ಪ್ರಯತ್ನಿಸುತ್ತಿರುವ ಮಹಮ್ಮದರು. ಇವರಿಬ್ಬರನ್ನೂ ಬೇರ್ಪಡಿಸಲು ಪ್ರಯತ್ನಿಸುತ್ತಿರುವ ನಾನು. ಇವರಿಬ್ಬರಿಗೂ ಏನಾದರೂ ಹುಚ್ಚು ಹಿಡಿದಿದೆಯೋ?

ಜ್ಞಾನ: – (ನಸೀರನನ್ನು ಕುರಿತು) ಇವರು ನನ್ನನ್ನು ಕರೆಯ ಬಂದಿರುವರು. ನಾನು ಹೋಗುವುದಕ್ಕೆ ಅನುಮತಿ ಕೊಡುತ್ತೀರಾ? (ಮಹಮ್ಮದನನ್ನು ಕುರಿತು) ನೀವೂ ಬರುವಿರೋ ಅಥವಾ ಕಾಫೀ ಗೀಫಿ ಆಗಬೇಕೋ ಇಲ್ಲಿ.

ಮಹ:— ಅಯ್ಯೋ ಏನಿಲ್ಲ. ಬರ್ತೀನೆ. ನಿಮ್ಮನ್ನು ಬಿಟ್ಟು ಹೇಗೆ ಇರಲಿ. ಆದರೆ ನೀವಾದರೂ ನನ್ನನ್ನು ಇಲ್ಲಿ ಕೂಡ ಕೊಡುವಿರೇನು? (ನಸೀರನನ್ನು ಕುರಿತು) ಇವರೇನು ನನ್ನನ್ನು ಬಿಡುವಹಾಗಿಲ್ಲ. ಈ ದಿನ ಟೆನ್ನಿಸ್ ಆಡಲಿಕ್ಕೆ ಪುರಸತ್ತೇ ಇಲ್ಲಾ...ನಡೆಯಿರಿ.

(ಎಲ್ಲರೂ ಹೋಗುವರು.)

(ತೆರೆ)

## —ಎರಡನೆಯ ದೃಶ್ಯ—

(ಮಹಮುದ್ ಅಕರಂ, ಜ್ಞಾನಚಂದ, ಹಣ್ಣು ಮಾರುವ ಮುಸಲ್ಮಾನ ವ್ಯಾಪಾರಿಗಳು, ಮುನಸೀಪಲ್ ಎಕ್ಸಿಕ್ಯೂಟಿವ್ ಆಫೀಸರ ಕೊಟಡಿಯಲ್ಲಿ ಕುರ್ಚಿಯಮೇಲೆ ಕುಳಿತು ಆಫೀಸರವರನ್ನು ನಿರೀಕ್ಷಿಸುತ್ತಿರುವರು. ಸಾಯಂಕಾಲ 4 ಘಂಟೆ ಸಮಯ.)

ಒಬ್ಬ ಅಂಗಡಿಯವನು: – ಈ ಮುನಸೀಪಾಲಿಟಿಯವರು ಬಹಳ ಸತಾಯಿಸುತಾತ್ತೆ ಇದ್ದಾರೆ. ಬೇಜಾರು ಹಿಡಿದ್ಹೋಗಿದೆ. ಪಾಪ! ಈ ಬಾಬುಗಳು ನಮಗಾಗಿ ಎಷ್ಟು ಪ್ರಯತ್ನ ಪಡುತ್ತಿದ್ದಾರೆ?

ಇನ್ನೊಬ್ಬ:— ಇದರಲ್ಲಿ ಸಂಶಯವಿಲ್ಲ. ಬೆಳಗ್ಗೆ ದ್ರಾಕ್ಷೀ ಹಣ್ಣಿನಿಂದ ಎಂಟಾಣೆ ಗಿಟ್ಟಿಸಿಯೇ ಬಿಟ್ಟೆ! ಇವರು ನಮಗಾಗಿ ಎಷ್ಟು ಕಷ್ಟ ಪಡುತ್ತಿದ್ದಾರೆ ಅನ್ನುವುದನ್ನು ನೀನು ಯೋಚಿಸಲಿಲ್ಲ.

ಮೂರನೆಯವನು:— ಒಳ್ಳೆ ಬಿಕನಾಸಿ. ಅವನು ಮೊದಲಿನಿಂದ ಚೆನ್ನಾಗಿ ಗೊತ್ತು ನನಗೆ.

ನಾಲ್ಕನೆಯವನು:— ಇದರಿಂದ ಕೆಡಕೇನು ಅಂತ? ವ್ಯಾಪಾರ ಮಾಡೋದಕ್ಕೆ ತಾನೆ ಅವನು ಕುಳಿತದ್ದು! ಸೂರೇ ಮಾಡೋದಕ್ಕಲ್ಲಲ್ವ.

ಎರಡನೆಯವನು:—ಅಗೋ ವಕಾಲತ್ತಿಗೆ ಇನ್ನೊಬ್ಬ ಬಂದ.

ಮೂರನೆಯವನು:—ಓಹೋ! ಓತಿ ಕಾಟಕ್ಕೆ ಬೇಲಿ ಸಾಕ್ಷಿ!! ಇರಲಿ. ಬಾಬುಗಳನ್ನು ನಾನು ನಮ್ಮ ಭಾಗದ ದೇವರೂಂತ ತಿಳಿದಿದೀನಿ. ಈಗಿನ ಕಾಲದಲ್ಲಿ ಇನ್ನೊಬ್ಬರನ್ನು ಯಾರಯ್ಯ ಕೇಳ್ತಾರೆ? ಆ ನಸೀರ ನನ್ನು ನೋಡಿಲ್ವೆ! ಅವನು ಮುಸಲ್ಮಾನರಲ್ಲಿಯೇ ವ್ಯಾಪಾರ ಮಾಡಿ ಅಂತ ನಮಗೆ ಹೇಳ್ತಾ ಇದ್ದ. ನಾನು ಇದು ಸಾಧ್ಯವಿಲ್ಲ. ಅಂತ ಸರಿಯಾಗಿ ಹೇಳಿದೆ. ಅಲ್ಲ. ಇಷ್ಟು ಯೋಚನೆ ಏತಕ್ಕೆ? ಹಿಂದೂ ಮುಸ್ಲಿಮರು ಏನು ಬೇರೆ ಬೇರೆಯವರೆ?

ಜ್ಞಾನ—(ಹತ್ತಿರ ಹೋಗಿ) ಏನು ಮಾತುಕತೆ ನಡೆಯುತ್ತಾ ಇದೆ. ನಾನೂ ತಿಳಿದುಕೊಳ್ಳಲೇ?

ಎಲ್ಲರೂ:—ಏನೂ ಇಲ್ಲ. ಸುಮ್ಮನೆ ತಲೆಹರಟೆ. ಅಷ್ಟೆ.

ಮಹ:—(ಜ್ಞಾನಚಂದನ ಹತ್ತಿರ ಹೋಗಿ) ಬಾಬುಗಳೇ, ಗೋ ಸಂರಕ್ಷಣೆಯ ವಿಷಯದಲ್ಲಿ ತಾವು ಸಹಾಯ ಮಾಡುವಿರೇನು?

ಜ್ಞಾನ: - ಸಹಾಯ ಮಾಡದೇ ಏನು? ಆದರೆ ನನ್ನ ಕೆಲಸ ಮೊದಲಾಗಲಿ, (ಇಷ್ಟರಲ್ಲಿ ಎಕ್ಸಿಕ್ಯೂಟಿವ್ ಆಫೀಸರ್ ಹೊರಗಡೆ ಬರುತ್ತಾರೆ. ಎಲ್ಲರೂ ಎದ್ದು ನಿಂತು ಕೊಳ್ಳುತ್ತಾರೆ. ಎಲ್ಲರೂ ವಂದಿಸಿ ಕುಳಿತುಕೊಳ್ಳುತ್ತಾರೆ.)

ಆಫೀಸರ್:— ಹೇಳಿ, ನೀವೆಲ್ಲಾ ಏಕೆ ಬಂದಿದ್ದೀರಿ?

ಜ್ಞಾನ:— (ಮುಂದೆ ಬಂದು) ತಮ್ಮಲ್ಲಿ ಕೆಲವು ವಿನಂತಿ ಮಾಡಿಕೊಳ್ಳಲು.

ಆಫೀ:— ಹೂ, ಸರಿ! ಹೇಳಿ!......ಏನು ಹೇಳಬೇಕು.......

ಜ್ಞಾನ:— ಮುನಸೀಪಾಲಿಟಿಯವರು ಈ ಗರೀಬರಾದ ಹಣ್ಣು ಮಾರುವವರಿಗೆ ಸರಿಯಾದ ಸ್ಥಳವನ್ನು ಏರ್ಪಡಿಸಿ ಕೊಟ್ಟಿಲ್ಲ. ಇವರಿಗೂ ಯಾವ ವಿಧವಾದ ಸಹಾಯವನ್ನೂ ಮಾಡಿರುವುದಿಲ್ಲ. ಆದರೆ Tax ಮಾತ್ರ ಹಾಕಿದ್ದಾರೆ. 8—10 ಆಣೆ ದಿನದ ಸಂಪಾದನೆ. ಇಂಥಾದ್ದರಲ್ಲಿ ಅಷ್ಟು Taxನ್ನು ಹೇಗೆ ತೆತ್ತಾರು? ಈ ವಿಷಯವಾಗಿ ನಾವು ತಮ್ಮಲ್ಲಿ ಹಿಂದೊಮ್ಮೆ ಅರಿಕೆ ಮಾಡಿ ಕೊಂಡಿದ್ದೆವು.

ಆಫೀಸರ್: — ಆದರೆ ಈ ಜನರು ಮುನಸೀಪಾಲಿಟಿಯ ಜಾಗವನ್ನು ಉಪಯೋಗಿಸಿ ಕೊಳ್ಳುತ್ತಿದ್ದಾರಲ್ಲಾ!

ಜ್ಞಾನ:— ನಿಜ! ಆದರೆ ಅವರ ಬಡತನದ ಕಡೆಗೆ ಸ್ವಲ್ಪ ದಯ ತೋರ ಬಾರದೆ!

ಆಫೀ:— ಇದು ಕಮಿಟಿಯ ಠೀರ್ಮಾನ, ಇದರಲ್ಲಿ ಹೆಚ್ಚು ಕಡಿಮೆ ಮಾಡುವುದಕ್ಕೆ ಸ್ವಲ್ಪವೂ ಸಾಧ್ಯವಿಲ್ಲ.

ಎಲ್ಲರೂ:— ನಾವು ಬಹಳ ಬಡವರು ಜೀಯಾ! ಅಷ್ಟು ಬಾಡಿಗೆ ನಾವು ಕೊಡಲಾರೆವು.

ಜ್ಞಾನ:— ಇವರೆಲ್ಲರೂ ನನ್ನ ಅಂಗಡಿಯ ಬಳಿಯೆ ಕುಳಿತು ಕೊಳ್ಳುವರು. ಇವರ ಸ್ಥಿತಿ ನನಗೆ ಗೊತ್ತು. ಕಮಿಟಿಯವರು ಪಾಪ! ಪೀಡಿಸುತ್ತಲೇ ಇರುತ್ತಾರೆ. ಹೀಗೆ ಆದರೆ ಇವರಿಗೆ ಎಂದಾದರೂ ದೊಡ್ಡ ಕಷ್ಟ ಬರದೇ ಇರಲಾರದು.

ಆಫೀ:— ಆದರೆ ಕಮಿಟಿಯವರು ಈ ವಿಚಾರದಲ್ಲಿ ಏನು ಮಾಡುವ ಹಾಗಿದ್ದಾರೆ? ನಾನೇನು ಮಾಡಲಿ? ಡೆಪ್ಯುಟೀ ಕಮೀಷನರಿಗೆ ಅರ್ಜಿ ಹಾಕಿಕೊಳ್ಳಿ. ನನಗೇನೂ ಗೊತ್ತಾಗುವುದಿಲ್ಲ.

ಜ್ಞಾನ: - (ಗಟ್ಟಿಯಾಗಿ) ನಾವು ಈಗ ನಿಮ್ಮ ಬಳಿಗೆ ಬಂದಿದ್ದೇವೆ. ಈ ವಿಷಯ ಡೆಪ್ಯುಟೀ ಕಮೀಷನರಿಗೆ ತಿಳಿಸಿದ್ದಾಯ್ತು. ಆದರಿಂದ ಏನೂ ಪ್ರಯೋಜನವಾಗಲಿಲ್ಲ. ಆದ್ದರಿಂದ.......

ಆಫೀ:— ಬಾಬುಗಳೇ ಕೇಳಿ. ಇದೇನು ನಮ್ಮ ನಿಮ್ಮ ಮನೆ ವಿಷಯ ಅಲ್ಲ. ಸರ್ಕಾರಿ ವಿಷಯು! ಯಾರಿಂದಲೂ ಏನು ಮಾಡುವುದಕ್ಕೂ ಆಗುವುದಿಲ್ಲ. ಒಳ್ಳೇದು. ನಾನು ಟೆನಿಸ್ ಆಡಲು ಹೋಗಬೇಕಾಗಿದೆ. (ಎದ್ದು) ತಮಗೆ ಈ ವ್ಯಾಪಾರಿಗಳ ವಿಷಯದಲ್ಲಿ ಅಷ್ಟು ಹಿತಚಿಂತನೆ ಇದ್ದರೆ, ಇನ್ನೊಂದು ಅಪ್ಲಿಕೇಷನ್ ಕೊಡಿ. ನಾನು Recommend ಮಾಡುತ್ತೇನೆ.

ಮಹ: — ಅಪ್ಲಿಕೇಷನ್ ಏತಕ್ಕೆ? ಅವರು ತೆರಿಗೆ ವಸೂಲು ಮಾಡುತ್ತಲೇ ಇರಲಿ. ನಾವು ಅಪ್ಲಿಕೇಷನ್ ಕೊಡುತ್ತಾನೇ ಇರು

ತ್ತೀವೆ! ಆಹಾ. ಏನು ಚೆಂದ! ಇದೇಕೆ ಇಷ್ಟು ಸತಾಯಿಸಬೇಕು! ನಿಮಗೆ ಟೆನ್ನಿಸ್ ಆಟ! ಇವರಿಗೆ ಇಲ್ಲಿ ಬಡತನದ ಕಾಟ!!

ಜ್ಞಾನ:— ಆಗಲಿ, ಕೊಡುತ್ತೇನೆ. ಹಾಗಾದರೆ ನೀವು ಕಮಿಟಿ ಇನ್ನು ಮುಂದೆ ತೆರಿಗೆ ವಸೂಲು ಮಾಡುವುದಿಲ್ಲವೆಂದು ಬರೆದು ಕೊಡಿ.

ಆಫೀಸರ್:— (ಕೋಪದಿಂದ) ನೀವು ನನ್ನನ್ನು ಅವಮಾನ ಪಡಿಸುತ್ತಿದ್ದೀರಿ! ಹೋಗಿ! ನಾನು ಏನನ್ನೂ ಮಾಡೋದಕ್ಕೆ ಆಗುವುದಿಲ್ಲ.

(ಹೊರಟು ಹೋಗುತ್ತಾರೆ. ಜನರು ಏಳುತ್ತಾರೆ.)

ಎಲ್ಲರೂ:— ಏನೂ ಮಾಡೋದಕ್ಕಾಗೊಲ್ವಂತೆ! ಈ ದೊಡ್ಡ ದೊಡ್ಡ ಮನುಷ್ಯರು ಕೆಳಗಡೆ ನೋಡುವುದೇ ಇಲ್ಲ. ಮೇಲೆ ದೃಷ್ಟಿ ಯಾವಾಗಲೂ ಪಾಪ!

(ಎಲ್ಲರೂ ಹೊರಡಲುದ್ಯುಕ್ತರಾಗುತ್ತಾರೆ.)

ಜ್ಞಾನ:— (ಒಬ್ಬನಿಗೆ) ಅಜೀಜ್, ನಾಳೆಯೇ ನೀನು ತೆರಿಗೆ ಕೊಡಬೇಕಲ್ವೆ? ತೆಗೆದುಕೋ ಈ ರೂಪಾಯೀನ (5 ರೂಪಾಯಿ ಕೊಡುತ್ತಾ) ನಾಳೆಯುದಂತು ಕೊಡು. ಇನ್ನಾರು ತೆರಿಗೆ ಕೊಡಬೇಕಾದವರು?

ಒಬ್ಬ:— ಈ ಆಲಿಯೊಬ್ಬ! ಇವನಿಗಂತೂ ಬಹಳ ಕಷ್ಟ ಪಾಪ! ನಿನ್ನೆಯಿಂದ ಮನೇಲಿ ಉಪವಾಸ!!

ಜ್ಞಾನ:— (10 ರೂಪಾಯಿನ ನೋಟೊಂದನ್ನು ತೆಗೆದು) ತೆಗೆದುಕೋ ಆಲಿ! ನೀನೂ!! ಸದ್ಯಕ್ಕೆ ನಡೆಯಿರಿ. ಮುಂದೆ ನೋಡೋಣ.

(ಎಲ್ಲರೂ ಸಲಾಂ ಮಾಡಿ ಹೊರಟು ಹೋಗುತ್ತಾರೆ.)

ಮಹ:— (ಜ್ಞಾನಚಂದನಿಗೆ) ಏನು ಹೀಗೆ ಹಂಚುತ್ತಿರುವಿರಿ? ಅದೂ ಈ ಗರೀಬರಿಗೆ! (ಸ್ವಗತ) ಇವರು ಮಾನವರಲ್ಲ! ದೇವತೆ!!

ಜ್ಞಾನ:— ಅಯ್ಯೋ ಮಿತ್ರರೇ! ಏನು ಹೇಳಲಿ! ಇವರ ಪ್ರತಿ ದಿನದ ಕಷ್ಟಗಳು ನನ್ನ ಕರುಳನ್ನು ಹಿಚುಕುತ್ತವೆ.

ಮಹ:— ಮುಸಲ್ಮಾನರು ಹಿಂದೂಗಳನ್ನು Bi-cought ಮಾಡುತ್ತಿರುವರೆಂದು ತಮಗೆ ತಿಳಿಯದೇನು! ಅದಕ್ಕೆ ಮುಖಂಡ ನಮ್ಮ ನಸೀರ್!

ಜ್ಞಾನ:— (ಆಶ್ಚರ್ಯದಿಂದ) ಆಹಾ! ನಿಜವೇ! ಆದರೆ ಇದರಿಂದ ಏನು ಲಾಭ? ಆದು ಸುಮ್ಮನೆ ಈಗ, ಕೊನೆಗೆ ಎಲ್ಲಾ ಸರಿ ಹೋಗುತ್ತೆ.

ಮಹ:— ಇಲ್ಲ. ಬಹಳ ತೀವ್ರವಾಗಿ Bi-cought ಶುರುವಾಗುವುದುಂಟು. ಇಂಥಾದ್ದರಲ್ಲಿ ನೀವು ಇವರಿಗೆ ಹಣವನ್ನು ಹಂಚುತ್ತಿರುವಿರಿ!

ಜ್ಞಾನ:— ಏನೂ ಪರವಾಗಿಲ್ಲ. ಮಹಮದರೇ! ಏನೂ ಪರವಾಗಿಲ್ಲ. ಜನಗಳಿಗೆ ಈ ರೀತಿಯ ನಡೆತೆಯಿಂದಲಾದರೂ ತಿಳಿವಳಿಕೆ ಬರಲಿ. ಹಿಂದೂ ಮುಸ್ಲಿಮರು ಪರಸ್ಪರ ಮಿತ್ರರಾಗುವ ಕಾಲ ಬರುವುದಿಲ್ಲವೆ! ನಿಜವಾಗಿಯೂ ಬರುತ್ತೆ. ಇದರಿಂದಲೇ ಭಾರತಕ್ಕೆ ಭಾಗ್ಯೋದಯ!

ಮಹ:— ನನಗೂ ಅದೇ ಇಷ್ಟ! ಈ ಪಾಷಂಡಿ ಮುಸ್ಲಿಮ್ ಮುಖಂಡರುಗಳ ವಿಷಯದಲ್ಲಿ ನನಗೆಷ್ಟು ಕೋಪ ಎಂಬುದು ನಿಮಗೆ ಗೊತ್ತಿಲ್ಲ. ಅವರನ್ನು ಕಂಡರೆ ನನಗೆ ಮೈ ಎಲ್ಲಾ ಉರಿಯುತ್ತೆ. ಅವರಿಂದ ಎಲ್ಲರೂ ಹಾಳಾಗುತ್ತಾರೆಯಲ್ಲಾ ಎಂದು ಒಂದೊಂದು ವೇಳೆ ದುಃಖವಾಗುತ್ತೆ ಬಾಬುಗಳೇ!

ಜ್ಞಾನ:— ಪಾಪ! ಆದರೆ ಈಗ ನನಗೆ ಯಾವ ಹೆದರಿಕೆಯೂ ಇಲ್ಲ. ನಿಮ್ಮಂಥ ಮುಸಲ್ಮಾನ ಮಿತ್ರರ ಹೃದಯಗತಿಯನ್ನು ಹಿಂದುಗಳಿಗೆ ತೋರಿಸಿಕೊಟ್ಟು, ಮುಸಲ್ಮಾನರ ಬೇರೆಯಲ್ಲ ಎಂಬುದು ನಮ್ಮ ಹಿಂದೂ ಸಹೋದರರಿಗೆ ತಿಳಿಸಿ ಕೊಡುತ್ತೇನೆ.

ಮಹ:— ಆದರೆ ನಾನೇನು ಮಾಡಲಿ ಮಿತ್ರರೇ!.

ಜ್ಞಾನ:— ಆಗಲಿ! ಅಂತಹ ಸದವಕಾಶ ಸಿಗಲಿ. ಒಳ್ಳೆಯದು ಬರುತ್ತೇನೆ.

ಮಹ:— ಒಳ್ಳೆಯದು (ಉದಾಸೀನತೆಯಿಂದ ಹೋಗುವನು.)

ಜ್ಞಾನ:— (ಅದೇ ರಸ್ತೆಯ ಪಕ್ಕದಲ್ಲಿ ನಿಂತುಕೊಂಡು.) ಹಿಂದೂ ಮುಸ್ಲಿಂ ಐಕ್ಯತೆಗಾಗಿ ನನ್ನ ಪ್ರಾಣ ಹೋಗಲಿ! ನನ್ನ ಸರ್ವಸ್ವವೂ ಹಾಳಾಗಲಿ! ಚಿಂತೆ ಇಲ್ಲ. ಈ ಪವಿತ್ರ ಉದ್ದೇಶಕ್ಕಾಗಿ ಆತ್ಮ ಸಮರ್ಪಣೆ

ಮಾಡುವ ಆ ಶುಭ ದಿನ ಬರುವುದೆ! ಹೇ! ಜಗದೀಶ್ವರಾ, ನನಗೆ ಶಕ್ತಿ ಕೊಡು. (ಈ ಯೋಚನೆಯಲ್ಲಿಯೇ ಹೋಗುವನು).

## —:ಮೂರನೆಯ ದೃಶ್ಯ:—

(ಆ ರಾತ್ರಿ ಭೂಕಂಪದ ವಿಧ್ವಂಸನಕ್ಕೆ ಒಳಗಾದ ಕ್ವೆಟ್ಟಾ ನಗರ. ಸಹಸ್ರಾರು ಮಂದಿ ಸತ್ತರು. ಗಾಯಗೊಂಡರು. ಜಚ್ಚಿ ಹೋದರು. ಎಷ್ಟೋ ಜನರ ಪತ್ತೆಯೇ ಇಲ್ಲ. ನಾಲ್ಕು ಕಡೆಗಳಲ್ಲೂ ಚೀರಾಟ. ರೋದನ. ಆ ಸಮಯದಲ್ಲಿ ನಸೀರುದ್ದೀನನ ಮನೆಯ ಮುಂದೆ ಜ್ಞಾನಚಂದನ ಶವ ಬಿದ್ದಿದೆ. ಆ ಶವದ ಪಕ್ಕದಲ್ಲಿ ನಸೀರುದ್ದೀನ ಮೂರ್ಛಿತನಾಗಿ ಬಿದ್ದಿದ್ದಾನೆ. ಕೆಲವು ಮಂದಿ ಸುತ್ತಮುತ್ತ ನಿಂತಿದ್ದಾರೆ. ಮುಹಮ್ಮದನೂ ಅಲ್ಲಿದ್ದಾನೆ).

ನಸೀರ್:— (ಕಣ್ದೆರೆದು) ಓಹೋ! ಹೇಗಿದ್ದುದು ಹೇಗಾಯ್ತು! ಏನಾಯ್ತು ಅನಾಹುತ! ನನ್ನ ಬೀಬಿ ಎಲ್ಲಿ? ಅಯ್ಯೋ! ನನ್ನ ಮಗು ಎಲ್ಲಿ?

ಮುಹ:— (ಕಣ್ಣೀರು ಸುರಿಸುತ್ತಾ ಮುಂದೆ ಬಂದು) ನೀನು ಮಾತ್ರವಲ್ಲ. ಒಟ್ಟು ಕ್ವೆಟ್ಟಾವೇ ನಾಶವಾಗಿದೆ. ದಿಕ್ಕಿಲ್ಲದಾಗಿದೆ. ನಸೀರ್! ನನ್ನ ಮನೆಯಲ್ಲೂ ಕೂಡ (ಜೋರಾಗಿ ಅಳುವನು) ಸುತ್ತಲೂ ಹೆಣಗಳ ರಾಶಿ! ದೇವರಿಗೆ ಗೊತ್ತು ಈ ಅವಸ್ಥೆ! (ಅಲ್ಲಿ ಇಲ್ಲಿ ನೋಡಿ) ಅರೆ ಜ್ಞಾನಚಂದ! ಇವರು ಹೇಗೆ ಬಂದರು ಇಲ್ಲಿಗೆ?

ನಸೀರ್:— ಹಾಯ್. ಜ್ಞಾನಚಂದ! ಏನೂ ಹೇಳಬೇಡ! ನಾನು ಈ ಅವಸ್ಥೆಯಲ್ಲಿ ಬಿದ್ದಿದ್ದೇನೆ. ಈಗ ನಾನು ಉಳಿದಿರುವುದು ಇದೇ ಮಹಾಶಯರ ಮೆಹರ್ಬಾನಿಯಿಂದ! ಅಯ್ಯೋ ಮಕ್ಕಳೇ!

ಮುಹ:— ಜ್ಞಾನಚಂದರು. ಇಲ್ಲಿ........ಹೇಗೆ........?

ನಸೀರ್:— (ಸ್ವಲ್ಪ ಹೊತ್ತು ಸುಮ್ಮನಿದ್ದು) ನಾನೇನನ್ನು ಹೇಳಲಿ! ಮುಹಮದ್! ಭೂಕಂಪ ಪ್ರಾರಂಭವಾಗುವುದಕ್ಕೆ ಮುನ್ನ ಇವರು ನನ್ನ ಮನೆಯ ಮುಂದೆ ಇದ್ದರು. ಮನೆ ಬೀಳುತ್ತಿರುವುದನ್ನು ನೋಡಿ, ತಮ್ಮ ಸ್ನೇಹಿತರೊಂದಿಗೆ ಹೋಗುತ್ತಿದ್ದವರು ನಮ್ಮ ಮನೆಯವರಿಗೆ ಸಹಾಯ ಮಾಡುವ ಉದ್ದೇಶದಿಂದ ಬಂದರು. ನಾನು, ನನ್ನ ಮಗು, ನನ್ನ ಬೀಬಿ ಮಲಗಿದ್ದ ಮನೆಯ ಚಾವಣಿ ಕಡಿದು ಬಿತ್ತು. ಅದರ ಕೆಳಗೆ ನಾವು

ಸಿಕ್ಕಿ ಬಿದ್ದೆವು. ಅವರು ಎಲ್ಲರಿಗಿಂತಲೂ ಮುಂಚೆ ನನ್ನನ್ನು ಈಚೆಗೆ ತೆಗೆದರು. ನಂತರ ನನ್ನ ಬೀಬಿಯನ್ನು! ಆದರೆ ಅಷ್ಟರಲ್ಲಿ ನನ್ನ ಬೀಬಿ ಸತ್ತುಹೋಗಿದ್ದಳು! ಹಾಯ್, ನನ್ನ ಮಗು! (ಅಳುತ್ತಾ) ಅವರು ಮನುಷ್ಯರಲ್ಲ ಮಹಮ್ಮದ್ ದೇವರು ನನ್ನ ಭಾಗದ ದೇವರು'!

ಮಹ:— ಅನಂತರ ಏನಾಯ್ತು ನಸೀರ್! ಪ್ರಪಂಚವೇ ಹಾಳಾಗುತ್ತಿತ್ತು. ಆಗ...... ನಸೀರ್! ಏನಾಯ್ತು ಮುಂದೆ?

ನಸೀರ್:— ಜ್ಞಾನಚಂದರು ನನ್ನ ಮಗುವನ್ನು ಹೊರಗಡೆ ತರಲು ಪ್ರಯತ್ನ ಪಡುತ್ತಿರುವಾಗ........ಮಹಮದ್........ಅವರು ಅಲ್ಲಿ ಸಿಕ್ಕಿ ಬಿದ್ದರು. ನಾನು ನನ್ನ ಕಣ್ಣಿಂದಲೇ ನೋಡಿದೆ........ಅವರ ಜೀವ ಹಾರಿ ಹೋಯ್ತು.

ಮಹ:— ಇಷ್ಟು ಧೈರ್ಯ! ಅನಂತರ ಅವರನ್ನು ಯಾರು ತೆಗೆದರು?

ನಸೀರ್:— ಅವರ ಸ್ನೇಹಿತ ಹೊರಗಡೆ ತರುವುದರಲ್ಲಿ ಇನ್ನೊಂದು ಗೋಡೆ ಪಾಪ ಅವನ ಮೇಲೆ ಬಿತ್ತು. ಇಬ್ಬರ ದೇಹವೂ ಅಲ್ಲೇ ಮಣ್ಣಾಯ್ತು. ಮಹಮದ್! ನಾನು ಸಾಯುತ್ತಿದ್ದೇನೆ......ಕೊನೆಯ ಉಸಿರು........ (ಮೂರ್ಛಿತನಾಗುತ್ತಾನೆ.)

ಮಹ:— ಸರಿ! ನಿನ್ನೆ ಇಂತಹ ಸಂದರ್ಭ ಒದಗೀತೆ ಎಂದು ಹೇಳುತ್ತಿದ್ದರು. ಇಂದು ಅದೇ ಸಂದರ್ಭ ಒದಗಿತು ಅವರಿಗೆ! ಇಂದು ಸಾವಿರಾರು ಮುಸ್ಲಿಮರು, ಹಿಂದೂಗಳು ಒಂದೇ ಕಡೆ ಸಮಾಧಿಸ್ಥರಾಗಿದ್ದಾರೆ. ಅಯ್ಯೋ! ಜ್ಞಾನಚಂದಾ! ಇದಕ್ಕಿಂತ ಒಳ್ಳೆಯ ಹಿಂದೂ ಮುಸ್ಲಿಂ ಐಕ್ಯತೆಯ ಉದಾಹರಣೆಯನ್ನು ಕೊಡಲಾಗುತ್ತಿರಲಿಲ್ಲವೆ? ಇವತ್ತಲ್ಲ! ನೀವು ಸದಾ ಮುಸ್ಲಿಮರ ಸೇವೆ ಮಾಡಿದಿರಿ! ಅವರಿಗಾಗಿ ಹೊಡೆದಾಡಿದಿರಿ!! ಖುದಾ! ಹಿಂದೂಸ್ಥಾನದ ಹಿಂದೂಗಳೆಲ್ಲರೂ ಜ್ಞಾನಚಂದನ ರೂಪನ್ನು ಧಾರಣ ಮಾಡಲಿ! ಮುಸ್ಲಿಮರು ಅವರನ್ನು ಅನುಸರಿಸುವಂತಾಗಲಿ!

ನಸೀರ್:— (ಕಣ್ಬಿಟ್ಟು) ಏ ಖುದಾ! ನನ್ನ ತಪ್ಪನ್ನು ಮನ್ನಿಸು! ನಾನು ನನ್ನೊಡನೆ ಹುಟ್ಟಿದ ಸೋದರರನ್ನು ತಿರಸ್ಕರಿಸಿದೆ!...ನನ್ನ ತಪ್ಪು

....ಖುದಾ ನನಗೆ ಇಂದು ಅರಿವಾಯ್ತು!....ಆಹಾ ಪ್ರಾಣ ಹೋಗುತ್ತಿದೆ. ....ನನ್ನ ತಪ್ಪು....ಕ್ಷಮಿಸು...(ಪ್ರಾಣ ಪಕ್ಷಿ ಹಾರುವುದು.)

ಮಹ:— (ನಸೀರನ ಶವವನ್ನು ಒಂದೆಡೆ ಇಟ್ಟು) ಎಲ್ಲವೂ ಮುಗಿಯಿತು. ಇದಕ್ಕಿಂತ ಹೆಚ್ಚಿನ ಉದಾಹರಣೆ ದೊರೆಯುಲಾರದು! (ಜ್ಞಾನಚಂದನ ಶವದ ಮೇಲೆ ಬಿದ್ದು ಅಳುತ್ತ) ಆಯ್ಯೋ! ನನ್ನ ಹಿಂದೂ ಸೋದರಾ! ನಿನಗಾಗಿ ಸಾವಿರಾರು ಮುಸ್ಲಿಮರ ಆತ್ಮಾರ್ಪಣೆ....

**ಹಿಂದೂ— ಶುಭಂ —ಮುಸ್ಲಿಂ**

ಭಾರತ ಮಾತಾಕೀ ಜಯ್!

÷÷÷÷÷



# ಗೋರಿಯ ಸೆರೆಯಲ್ಲಿನ ಸಿಂಹ

## ಪಾತ್ರ ಪರಿಚಯ:—

ಪೃಥ್ವೀರಾಜ ಚೌಹಾನ್—ದಿಲ್ಲಿ ಮತ್ತು ಅಜ್ಮೀರಿನ ರಾಜ.
ಚಂದಬರದಾಯಿ —ಆತನ ಕಾಲದ ಮಹಾ ಕವಿ.
ಶಹಾಬುದ್ದೀನ ಗೋರಿ — 'ಗೋರ್'ದ ಸುಲ್ತಾನ. ಸನ್ 1192
ಅಖ್ತರ್ —ಸಿಪಾಯಿ.

(ತುರಾಯಿನ್ ಯುದ್ಧಾ ನಂತರ)

(ಸಂಧ್ಯಾ ಸಮಯ. ಗೋರಿಯ ಕೋಟೆಯಲ್ಲಿ ಪೃಥ್ವೀ ರಾಜನು ಖೈದಿಯಾಗಿದ್ದಾನೆ. ಆತನು 45 ವರ್ಷದ ಪ್ರೌಢ ವ್ಯಕ್ತಿ., ಆತನ ಶರೀರದಲ್ಲಿ ಇನ್ನೂ ಶಕ್ತಿ ತುಂಬಿ ತುಳುಕುತ್ತಿದೆ. ಎತ್ತಿದ ಮೀಸೆ—ಗಂಭೀರವಾದ ಮುಖ ಮುದ್ರೆ. ಅವನ ಕೈಗಳು ಸಂಕಲೆಗಳಿಂದ ಬಂಧಿಸಲ್ಪಟ್ಟವೆ. ತನ್ನ ಮೊಣಕಾಲ್ಗಳ ಮೇಲೆ ಮೊಣಕೈಗಳೂರಿ ತಲೆಯನ್ನು ತಗ್ಗಿಸಿಕೊಂಡು ಕುಳಿತಿದ್ದಾನೆ. ಕಾಲುಗಳ ಸಂಕಲೆಯು ಅವನು ಅತ್ತ ಇತ್ತ ಅಲ್ಲಾಡುವಾಗ ಶಬ್ದ ಮಾಡುತ್ತದೆ. ತಲೆ ಕೂದಲು ಕೆದರಿವೆ. ಗಡ್ಡ ವಿಪರೀತವಾಗಿ ಬೆಳೆದಿದೆ. ಅವನ ಬಟ್ಟೆಗಳು ಬಹು ಮಾಸಿ ಹೋಗಿವೆ. ಅಲ್ಲಲ್ಲೇ ಸುಟ್ಟು ಹೋಗಿವೆ. ರಕ್ತದ ಕಲೆಗಳಿವೆ. ಕಾಲಿನಲ್ಲಿ ಪಾದರಕ್ಷೆಗಳಿವೆ, ಅವನ್ನು ಧೂಳು ಮುಚ್ಚಿಕೊಂಡಿದೆ. ಕಣ್ಣು ಮುಚ್ಚಿ ಕುಳಿತಿದ್ದಾನೆ. ಎದುರುಗಡೆಯ ಕಿಟಕಿಯಿಂದ ಆಗಾಗ ಗಾಳಿ ಬೀಸಿ ಅವನ ತಲೆಗೂದಲನ್ನು ಹಾರಾಡಿಸುತ್ತಿದೆ. ಬಲಗಡೆಯಲ್ಲಿ ಚಂದಬರದಾಯಿ ಕುಳಿತಿರುವನು. ಅವನಿಗೂ ಸುಮಾರು ಪೃಥ್ವೀರಾಜನಷ್ಟೇ ವಯಸ್ಸು. ಅವನ ಬಟ್ಟೆಗಳು ಸುಸಜ್ಜಿತವಾದುವು ಮತ್ತು ಶುಭ್ರವಾದುವು ಆಗಿವೆ. ಆದರೆ ಬಹು ಸರಳ; ಮುಖ ಮಂಡಲದಲ್ಲಿ ದುಃಖ ರೇಖೆ ಅಂಕಿತವಾಗಿವೆ. ಅವನು ಪೃಥ್ವೀರಾಜನನ್ನು ಕರುಣಾಪೂರಿತ ದೃಷ್ಟಿಯಿಂದ ನೋಡುತ್ತಲಿದ್ದಾನೆ. ಸ್ವಲ್ಪ ಹೊತ್ತು ಇಬ್ಬರೂ ಸುಮ್ಮನೆ ಕುಳಿತಿರುವರು. ನಂತರ ವೇದನೆಯಿಂದ ತಲೆ ತಗ್ಗಿಸಿಕೊಂಡೇ (ಪ್ರಥ್ವೀರಾಜನು ಮಾತನಾಡುತ್ತಾನೆ.)

ಪೃಥ್ವೀರಾಜ: — ಕೇಳಬೇಡ! ನನ್ನನ್ನು ಏನೂ ಕೇಳಬೇಡ!! ಯಾವ ದುರ್ನಿಮಿಷ ಪೃಥ್ವೀರಾಜನನ್ನು ಪೃಥ್ವೀರಾಜನಾಗಿರಲು ಬಿಡಲಿಲ್ಲವೊ, ಆ ನಿರ್ದಯ ದುರ್ನಿಮಿಷದ ಮಾತನ್ನು ಬಿಡು; ಬಹಳ ಕಠಿಣದಿಂದ ಆ ಕಷ್ಟವನ್ನು ಮರೆಯುತ್ತ ಇರುವೆನು. ಚಂದ್!! ಶರಹತಿಗೆ ಸಿಕ್ಕ

ಸಿಂಹಕ್ಕೂ ಇಷ್ಟು ವೇದನೆಯಾಗಲಾರದು.......ಅಯ್ಯೋ. (ಯೋಚಿಸುವನು.)

ಚಂದ:—(ದಯೆಯಿಂದ) ಮಹಾರಾಜ! ನಿಮ್ಮ ಈ ಶರೀರ! ಶೌರ್ಯಭರಿತವಾದ ಈ ಶರೀರ ಈಗ ನಿಸ್ತೇಜವಾಗಿದೆ. ಘೋರನವರು ಇಷ್ಟು ನಿರ್ದಯರೆ? ಶಕ್ತಿಶಾಲಿಯಾದೊಬ್ಬ ರಾಜನಲ್ಲಿ ಇಷ್ಟು ಪಶುತ್ವ!

ಪೃಥ್ವಿ—ಪಶುತ್ವ! ಓಹೋ!! ಚಂದ, ಆ ಸಮಯದಲ್ಲಿ ನೀನಿದ್ದಿದ್ದರೆ ನಡುಗುತ್ತಿದೆ. ನಿನ್ನ ಲೇಖನಿಯು ಕುಂಠಿತವಾಗುತ್ತಿತ್ತು. ಮನುಷ್ಯತ್ವ ಗಾಬರಿಗೊಳ್ಳುತ್ತಿತ್ತು. ಆಶ್ಚರ್ಯ! ಮಾತಾ ವಸುಂಧರೆಯು ಈ ಅನಿಷ್ಟ ಕೃತ್ಯಗಳನ್ನು ಹೇಗೆ ನೋಡುತ್ತಿರುವಳು! ಮತ್ತು ಈ ಪೃಥ್ವೀ ರಾಜನ ಶರೀರಕ್ಕೆ ಇಷ್ಟು ಅತ್ಯಾಚಾರವಾಗುತ್ತಿದ್ದರೂ ಸುಮ್ಮನಿರುವ ಅವಳು ಮಾತೆಯೆ! ಕವಿ! ವಸುಂಧರಾ! ಮಾತೆಯಲ್ಲಿ? ಪಿಶಾಚಿ ಎಂದು ಘೋಷಿಸು, ಘೋಷಿಸು!

ಚಂದ:— ಮಹಾರಾಜ!

ಪೃಥ್ವೀ:— (ಅದೇ ಭಾವಾವೇಶದಲ್ಲಿ) ಮತ್ತು........ಮತ್ತು........ ........ಈ ಗಾಳಿ! ಈ ಜಡ ಶರೀರದ ಮೇಲೆ ಬೀಸಿ ಸುಖವನ್ನು ನೀಡುವ ಈ ಗಾಳಿ........ಆದರೆ........ಆ ಸಮಯದಲ್ಲಿ! ಪಾಪಿ!.......(ತಿರಸ್ಕಾರ ದೃಷ್ಟಿ.)

ಚಂದ:— ಈ ಉನ್ಮಾದ........!

ಪೃಥ್ವಿ:— ಉನ್ಮಾದ! ಸುಮ್ಮನಿರು ಚಂದ! ಇಷ್ಟನ್ನೂ ಸಹಿಸಿಕೊಂಡು ನಾನಿನ್ನು ಬದುಕಿಕೊಂಡಿರುವೆನು—ಆಶ್ಚರ್ಯ! ಭಯಂಕರ ರಾತ್ರಿಯಾಗಿತ್ತು. ಪ್ರೇಯಸಿ ಸಂಯುಕ್ತಳು ಇಲ್ಲದೆ ಆ ರಾತ್ರಿ ಬಹು ಬೇಸರವಾಗಿತ್ತು. ಅಂಧಕಾರ ಪಸರಿಸಿತ್ತು. ಅಷ್ಟರಲ್ಲೇ ಕೆಂಪಾದ ನಾಲ್ಕು ಸರಳುಗಳು ನನ್ನ ಕಡೆ ಬರತೊಡಗಿದವು. ಅದು ಅಂಧಕಾರ ರೂಪಿಯಾದ ರಾಕ್ಷಸನ ಜಿಹ್ವೆಗಳಂತೆ ತೋರಿ ಬಂತು. ಐವರು ಮುಂದೆ ಬಂದರು; ನಾಲ್ವರು ಕಟುಕರು; ಒಬ್ಬ ಅವರ ಮುಖಂಡ; ಮುಖಂಡನ ಕೈಯಲ್ಲೊಂದು ಕಠಾರಿಯಿತ್ತು. ಖೈದೀ, ನಿನ್ನ ಕಣ್ಣುಗಳು ತೆಗೆಯಲ್ಪಡುವುವು—ಎಂದ.

ಚಂದ:— ಈ ದುಷ್ಕೃತಿ— (ಹುಬ್ಬನ್ನು ಮೇಲೇರಿಸುವುದು.)

ಪೃಥ್ವಿ:— (ಅದೇ ಸ್ವರದಲ್ಲಿ) ನಾನೆಂದೆ! ನಾ....ನೆಂ....ದೆ! ಬಂಧಿಸಿದ ಮೇಲೆ ಈ ಕ್ರೂರ ಶಿಕ್ಷೆ! ಏ, ಮನುಷ್ಯತ್ವವನ್ನು ಅರಿತು ಮಾಡಿರಿ! ಪ್ರಾಣ ಹರಣ ಮಾಡಿ, ಪರವಾಗಿಲ್ಲ. ಆದರೆ ಒಬ್ಬ ರಾಜನ ಮರ್ಯಾದೆಯನ್ನು ಉಳಿಸಿರಿ! ಚಂದ್!........ಅವನೆಂದ........"ಸುಮ್ಮನಿರು" (ನೀಳವಾದ ಉಸಿರು.)

ಚಂದ:— (ಗಾಬರಿ) ಏನು ಹೇಳಿದನು!—'ಸುಮ್ಮನಿರು', ಹೂ.

ಪೃಥ್ವಿ:— ಹೌದು, ಹೀಗೆ ಹೇಳಿದನು. ದಿಲ್ಲಿ ಮತ್ತು ಅಜ್ಮೀರ್‌ಗಳನ್ನು ಕೇವಲ ಕಣ್ಣಿನ ಸಂಕೇತ ಮಾತ್ರದಿಂದ ಕುಣಿಸುತ್ತಿದ್ದ ಚೌಹಾನನಿಗೆ ಈ ಶಬ್ದವನ್ನು ಕೇಳುವಂತಾಯ್ತು! ದಿಲ್ಲಿಯಲ್ಲಿರುವಾಗಲೇ ಈ ಶಬ್ದಗಳು ನನ್ನ ಕಿವಿಯಲ್ಲಿ ಬಿದ್ದಿದ್ದರೆ........ರೆ....ಹಾಯ್! ನಾಲಿಗೆ ತಡೆಯುತ್ತದೆ. ಮಾತನಾಡಲಾಗುವುದಿಲ್ಲ.

ಚಂದ:— (ದುಃಖದಿಂದ) ಆಹಾ! ವೀರಯೋಧ! ರಾಜಾಧಿರಾಜ ಪೃಥ್ವೀರಾಜನಿಗೆ ಈ ಹೀನ ದಶೆಯೇ?

ಪೃಥ್ವೀ:— (ತನ್ನ ವಿಚಾರದಲ್ಲಿ ಮಗ್ನನಾಗಿ) ನಂತರ........ನಂತರ ಎಲ್ಲರೂ ಸೇರಿ ನನ್ನನ್ನು ಗಟ್ಟಿಯಾಗಿ ಹಿಡಿದುಕೊಂಡರು. ನನ್ನ ಕೈಕಾಲುಗಳನ್ನು ಕಟ್ಟಿದರು. ನಾನು ಖಂಡಿತವಾಗಿಯೂ ಅಸಹಾಯಕನಾಗಿದ್ದೆ. ಚಂದ! ಆಗ ನನ್ನ ಜೀವನಕ್ಕೆ ಮೊದಲನೆಯ ಸಾರಿ!........ ಕೇವಲ ಪ್ರಥಮಬಾರಿ.......ನನ್ನ ಕಣ್ಣುಗಳಲ್ಲಿ ಹನಿಗಳು ಉದುರಿದವು—

ಚಂದ:— ಮಹಾರಾಜ! ತಮ್ಮ ಕಂಠ ಒಣಗುತ್ತಿದೆ. ನೀರನ್ನಾದರೂ ತೆಗೆದುಕೊಳ್ಳಿ.

ಪೃಥ್ವಿ:— (ತನ್ನ ವಿಚಾರದಲ್ಲೆ ಮಗ್ನನಾಗಿ) ಎರಡು ಸರಳುಗಳು ನನ್ನ ಕಣ್ಣುಗಳ ಹತ್ತಿರ ಬಂದವು. ಅವುಗಳ ಬಿಸಿಯು ನನಗೆ ಅರಿವಾಗುತ್ತಾ ಬಂತು. ಆಗ ನನಗೆ ನೆನಪು ಬಂತು........ನೆನಪು ಬಂತು... ನನಗೆ....ಸಂಯೋಗಿ ತಾಳು ಹಿಂದೊಂದು ಬಾರಿ ಇದೇ ರೀತಿ ತನ್ನ ಮುಖ ಮಂಡಲವನ್ನು ಮುಂದೆ ತಂದು, ಇದೇ ಕಣ್ಣುಗಳನ್ನು ಚುಂಬಿಸಿದ್ದಳು. ಚಂದಾ, ಆ ಅಧರಗಳ ಮೃದುತ್ವವನ್ನು ನೆನೆಸಿಕೊಂಡರೆ........

ಚಂದ:— (ಚಂಚಲನಾಗಿ) ಮುಂದೆ ಹೇಳದಿರಿ! ನಾನು ಕೇಳಲಾರೆ!

ಪೃಥ್ವಿ:—ಒಂದೇ ಒಂದು ಕ್ಷಣದಲ್ಲಿ ಅವರು ನನ್ನ ಕಂಗಳಲ್ಲಿ ನಾಟಿದರು, ಮತ್ತು ಕಣ್ಗೊಂಬೆಗಳನ್ನು ಒಡೆದರು.

ಚಂದ:—(ಅಧೀರನಾಗಿ) ಇನ್ನು ಕೇಳಲಾರೆ. ಈ ಕ್ರೂರ ಕಥೆಯನ್ನು!

ಪೃಥ್ವಿ:—(ಶಾಂತನಾಗಿ) ಒಳ್ಳೆಯದು. ಕೇಳಬೇಡ! ಆದರೆ ಇಷ್ಟನ್ನು ಮಾತ್ರ ತಿಳಿದಿರು! ಯಾವ ಕಂಗಳಲ್ಲಿ ಸಂಯೋಗಿತೆಯ ಮೂರ್ತಿಯು ಅಂಕಿತವಾಗಿತ್ತೋ ಆ ಕಂಗಳು ಈಗಿಲ್ಲ. ಯಾವ ಕಂಗಳಲ್ಲಿ ಸೌಂಧರ್ಯ ಸುಧಾಪಾನದ ಮಾದಕತೆಯು ಸೂಸುತ್ತಿತ್ತೋ ಆ ಕಂಗಳು ಈಗಿಲ್ಲ.

ಚಂದ: –(ದೃಢದಿಂದ) ಯಾವ ಕಂಗಳು ಕ್ರೂರದೃಷ್ಟಿಯಿಂದ ಎಷ್ಟೋ ರಾಜರನ್ನು ನಿಸ್ತೇಜಗೊಳಿಸಿದ್ದವೋ. ಯಾವ ಕಂಗಳು ರಕ್ತ ವರ್ಣಿತವಾಗಿ ರಣಕ್ಷೇತ್ರದಲ್ಲಿ ರಕ್ತಪಾತ ಮಾಡುತ್ತಿದ್ದವೋ ಆ ಕಂಗಳು ಇಲ್ಲ—

ಪೃಥ್ವಿ:—ಆ ಕಂಗಳು! ಅಯ್ಯೋ!! ಆ ಕಂಗಳು ಜಯಚಂದ್ರನ ವಿಶ್ವಾಸಘಾತಾಗ್ನಿಯಲ್ಲಿ ಭಸ್ಮೀಭೂತವಾದವು. ಕವಿ, ನನ್ನ ಕಲ್ಪನೆಗೂ ನಿನ್ನ ಕಲ್ಪನೆಗೂ ಎಷ್ಟು ಅಂತರ? ಆದರೆ ಈಗ ಆ ಪೃಥ್ವೀರಾಜನು ಉಳಿಯಲಿಲ್ಲ!

ಚಂದ:—ಮಹಾರಾಜ!.......

ಪೃಥ್ವಿ—ಬಾರಿ ಬಾರಿಗೂ ನನ್ನನ್ನು ಮಹಾರಾಜನೆಂದೇಕೆ ಕರೆಯುವೆ! ನಾನೊಬ್ಬ ಖೈದಿ! (ಸಂಕಲೆಗಳು ಶಬ್ದಮಾಡುತ್ತವೆ.)

ಚಂದ:— ಆದರೆ! ನನಗೆ ಅಲ್ಲ! ಆದರೆ ತಮ್ಮ ಶರೀರವು ಮಾತ್ರ ಖೈದಿಯಾಗಿದೆ, ಆತ್ಮ! ತಮ್ಮ ಆತ್ಮವು ಖೈದಿಯಾಗಲಾರದೆಂದು ನನ್ನ ಪೂರ್ಣ ವಿಶ್ವಾಸವಿದೆ. ತಾವು ಅದೇ ಪೃಥ್ವೀರಾಜ ಚೌಹಾನ! ಆಗ ನೀವು ಭಾರತದಲ್ಲಿ ಇದ್ದಿರಿ, ಈಗ ಎಲ್ಲಿ! ಸಿಂಹವು ಬಲೆಯಲ್ಲಿದ್ದರೂ ಸಿಂಹವೆಂದೇ ಕರೆಯಲ್ಪಡುವುದಷ್ಟೆ! (ಗರ್ವ ಮುದ್ರಾ.)

ಪೃಥ್ವಿ—ಸಿಂಹವನ್ನು ಸಿಂಹವೆಂದೇ ಕರೆಯಲು ಅಪೇಕ್ಷೆಪಡುವು ದಾದರೆ ಎಲ್ಲಿ ನಿನ್ನ ಕಠಾರಿ! ಈ ನನ್ನ ವಕ್ಷಸ್ಥಲವನ್ನು ಭೇದಿಸು! ಪೃಥ್ವಿ ರಾಜನ ಗೌರವದಿಂದ ಪತಿತವಾದ ಈ ಪ್ರಾಣಿಗೆ ಈ ಪ್ರಾಣದ ಆವಶ್ಯ ಕತೆಯಿಲ್ಲ! ಈ ಜೀವನದ ಒಂದೊಂದು ಕ್ಷಣವೂ ನಿನ್ನ ಕಠಾರಿ ಅಲಗಿ ಗಿಂತ ತೀಕ್ಷ್ಣವಾಗಿದೆ. (ಸಂಕಲೆಗಳ ಶಬ್ದ)ಕೊಡು........ನಿನ್ನ ಕಠಾ ರಿಯನ್ನು!

ಚಂದ:—ಕಠಾರಿ! ಅದನ್ನೇ ಮಹಮದ್ ಗೋರಿಯ ಅಪ್ಪಣೆ ಯಂತೆ ಜೈಲಿನ ದ್ವಾರಪಾಲಕನು ಕೇಳಿ ತೆಗೆದುಕೊಂಡಿರುವನು.

ಪೃಥ್ವಿ:—(ಹಲ್ಲು ಕಡಿದು) ತೆಗೆದುಕೊಂಡಿರುವನು! ಕೈಗಳು! ಕೈಗಳನ್ನು ಗೋರಿಯು ಕಡಿಯಲಿಲ್ಲವಷ್ಟೆ!! ನೀಚ! ಪಾಪಿ!! (ನಿಂತು) ಚಂದ, ನೀನು ಪ್ರಾಣಹೀನನಾಗಿನ್ನು ಒಳಬಂದಿರುವೆ? ವೀರರ ಪ್ರಾಣದ ಕಠಾರಿ........ಗೊತ್ತಿಲ್ಲವೆ!

ಚಂದ:—ಗೊತ್ತಿದೆ. ಆದರೆ ಸುಲ್ತಾನನ ಆಜ್ಞೆ!

ಪೃಥ್ವಿ:—ಸುಲ್ತಾನನ ಆಜ್ಞೆ! ಗೋರಿಯ ಆಜ್ಞೆ! ನೀನು ಅವನಾ ಜ್ಞೆಯ ಪರಿಪಾಲಕನೋ!

ಚಂದ:—(...........) ಆದರೆ...ಆದರೆ...ಈ ಕಠಾರಿ (ನಡುವಿನಲ್ಲಿ ಬಚ್ಚಿಟ್ಟಿದ್ದ ಕಠಾರಿಯನ್ನು ಹೊರತೆಗೆದು) ನನ್ನ ಆತ್ಮದಂತೆ ಇನ್ನೂ ನಡುವಿ ನಲ್ಲಿ ಬಚ್ಚಿಟ್ಟುಕೊಂಡಿದ್ದೇನೆ. ನಾನು ಇದರಿಂದ ಇನ್ನಾವ ಕಾರ್ಯವನ್ನು ಸಾಧಿಸಬಲ್ಲೆ!

ಪೃಥ್ವಿ—(ಪ್ರಸನ್ನತೆಯಿಂದ) ಪ್ರಿಯಚಂದ! ಮಹಾಕವಿ, ಮಿತ್ರಾ ಬಾ...ನನ್ನ ಜೀವನದ ಭಯಾನಕ ಅಗ್ನಿಯನ್ನು ಶಾಂತಗೊಳಿಸು ಬಾ, ಬಾ ನಿನ್ನ ಹಣೆಯನ್ನು ಚುಂಬಿಸುವೆನು. ಆಹಾ ನಿನ್ನ ಹಣೆಯು ಎಲ್ಲಿರುವುದೋ ಕಾಣಿಸದಲ್ಲ......ಅಯ್ಯೋ!

ಚಂದ:—ಮಹಾರಾಜ! ವಿಚಲಿತರಾಗದಿರಿ!! ನಾನು ವೀರ ಚೌಹಾನನ್ನು ಈ ಅವಸ್ಥೆಯಲ್ಲಿ ನೋಡಲಾರೆ!!! ನಾನೂ ಈಗಲೇ....

ಪೃಥ್ವೀ—(ಮಧ್ಯೆ) ಹಾ! ಹಾ!! ತಡಮಾಡಬೇಡ! ಸಾವಕಾಶ ಮಾಡಬೇಡ! ನನ್ನ ಮಿತ್ರ ಚಂದಾ! ಮಹಾಕವಿ........

ಚಂದ:—ಮಹಾರಾಜ, ಸಾವಕಾಶ ಮಾಡುವುದಿಲ್ಲ! ಈ ಕಠಾರಿಯನ್ನು ಕೊಳ್ಳಿ. ಇದು ಹೃದಯವನ್ನು ಹೊಕ್ಕು ಶೀಘ್ರವಾಗಿ ದುಃಖದಿಂದ ಮುಕ್ತರನ್ನಾಗಿ ಮಾಡುವುದು! ನನ್ನ ಪ್ರಿಯ ಕಠಾರಿಯೇ! ಅಂತ್ಯದಲ್ಲೊಂದುಬಾರಿ ತಮ್ಮ ಪಾದವನ್ನು ಸ್ಪರ್ಶಿಸುವೆನು. (ಚರಣವನ್ನು ಸ್ಪರ್ಶಿಸುವನು) ನಾನು, ತಮಗಲ್ಲ; ನನಗೇ ಆಘಾತ ಮಾಡಿಕೊಳ್ಳುತ್ತಿದ್ದೇನೆ. ಏಕೆಂದರೆ ನಾನು ಈ ನಿಮ್ಮ ದುರವಸ್ಥೆಯನ್ನು ನೋಡಲಾರೆ (ಕಠಾರಿಯನ್ನು ಮೇಲಕ್ಕೆತ್ತುವನು)

ಪೃಥ್ವಿ:—(ವಿಚಲಿತನಾಗಿ) ಅಲ್ಲ, ಅಲ್ಲ, ಹೀಗೆ ಕೂಡದು ಚಂದ!.... (ಚಂದನು ಆತ್ಮಘಾತ ಮಾಡಿಕೊಳ್ಳಲು ಹೋಗುವನು. ಆದರೆ ಹಿಂದಿನಿಂದ ಮಹಮುದ್ ಗೋರಿಯು ಬಂದು ಅವನನ್ನು ತಡೆದು, ಕಠಾರಿಯನ್ನು ಕಿತ್ತುಕೊಳ್ಳುವನು. ಗೋರಿಯು 35 ವರ್ಷದ ಯುವಕ. ಬಲಿಷ್ಠ. ಯುದ್ಧದ ಉಡುಪಿನಲ್ಲಿದ್ದಾನೆ.)

ಗೋರಿ:— (ನಕ್ಕು) ಜೀವನ ಅಷ್ಟು ನಿಕೃಷ್ಟವಾದುದಲ್ಲ! ಸರದಾರರೇ! ಈ ಪ್ರಪಂಚ ಹೀಗೆ ನಡೆಯುವುದು ಮತ್ತು ನಡೆಯುತ್ತಲೇ ಇರುವುದು. ತಾವು ಇಷ್ಟೇಕೆ ನಿರಾಶರಾಗುವಿರಿ! ಸರದಾರ! ನನ್ನ ಅರಮನೆಯಲ್ಲೇನಾಗುತ್ತಿರುವುದೆಂಬುದನ್ನು ನಾನರಿಯೆನೆ? ಗೋರನ ಸುಲ್ತಾನನಿಗೆ ಮೈಯೆಲ್ಲಾ ಕಣ್ಣು! (ಚಂದನು ಒಂದೇ ದೃಷ್ಟಿಯಿಂದ ನೋಡುವನು) ಆದರೆ, ಭೇಷ್! ತಾವೆಷ್ಟು ಸ್ವಾಮಿನಿಷ್ಠರು! ತಮ್ಮ ಸ್ವಾಮಿಯ ಈ ಸ್ಥಿತಿಯನ್ನು ನೋಡಲಾರಿರಲ್ಲವೆ? ತಮ್ಮ ಸ್ವಾಮಿನಿಷ್ಠೆಗಾಗಿ ಬಹುಮಾನ ಬೇಡ! (ಚಂದನು ಸುಮ್ಮನಿರುವನು) ಏನೂ ಬೇಡ! ಮಾತಾಡಿ!! ಈಗ ತಾನೇ ಮಾತಾಡುತ್ತಿದ್ದಿರಲ್ಲವೇ? ಅಂಧನೊಬ್ಬನ ಪಾದಗಳನ್ನು ಸ್ಪರ್ಶಿಸುತ್ತಿದ್ದಿರಲ್ಲವೆ? ಅವನ ಕಣ್ಣುಗಳನ್ನು ಸ್ಪರ್ಶಿಸುವುದಿಲ್ಲವೆ? ಆಹಾ! ಎಷ್ಟು ಚನ್ನ!! (ವ್ಯಂಗ್ಯ)

ಚಂದ—ಚಂದವೇ ಸರಿ! ಆ ಕಂಠೀರವನ ಕಂಗಳು ಈಗ ಆತ್ಮದಲ್ಲಡಗಿವೆ!

ಗೋರಿ— ಆತ್ಮದಲ್ಲಿ! ಬಹಳ ಒಳ್ಳೆಯದು!! ಈ ಕಂಠೀರವ ಹಾಗಾದರೆ ನಿನ್ನನ್ನು ಅದೇ ಕಣ್ಣುಗಳಿಂದ ನೋಡುತ್ತಿರುವುದಲ್ಲವೆ! ಪೃಥ್ವೀರಾಜ! ನನ್ನನ್ನು ಯಾವ ಕಣ್ಣುಗಳಿಂದ ನೋಡುತ್ತಿರುವೆ?

ಪೃಥ್ವಿ—ಗೋರಿ! ನೀನು ನೋಡುವುದಕ್ಕೆ ಯೋಗ್ಯನಾಗಿರುವುದಿಲ್ಲ. ನಾನು ಈ ಕುರುಡಾದ ಕಣ್ಣುಗಳಿಂದ ನೋಡಬಲ್ಲವನಾಗಿದ್ದರೂ ನಿನ್ನನ್ನು ನೋಡುತ್ತಿರಲಿಲ್ಲ. ಇವನ್ನು ನೀನು ಹಾಳು ಮಾಡಿದ್ದು ಒಳ್ಳೆಯದೇ ಆಯ್ತು. (ಸ್ವಲ್ಪ ತಡೆದು) ಏನು ನೋಡಲಿ! ಆಗ ನಿನ್ನ ಶಿರಸ್ತ್ರಾಣವು ನನ್ನೊಂದು ಬಾಣದಿಂದ ಹಾರಿಹೋಗಿತ್ತು. ನೀನು ಮರೆತು ಬಿಟ್ಟಿರುವಿಯೇನು? ಆಗ ನಾನು ಪೂರ್ಣ ದೃಷ್ಟಿಯಿಂದ ನೋಡಿದ್ದೆ. ನೀನು ಮರೆತಿರುವೆ! ಸರದಾರರ ಮಾತಿನಂತೆ ನಾನು ನಿನ್ನನ್ನು ಹಿಂದಟ್ಟಿಕೊಂಡು ಬರಲಿಲ್ಲ. ಅದೇ ನನ್ನ ಈ ಅವಸ್ಥೆಗೆ ಕಾರಣವಾಯ್ತು. ನನ್ನ ಬಾಣ ನಿನ್ನ ಶರೀರವನ್ನು ಭೇದಿಸಲಾರದೆ ಹೋಯ್ತು........!

ಗೋರಿ (ಪರಿವೆಯಿಲ್ಲದೆ) ಸರಿ! ನಿನ್ನ ಬಾಣಕ್ಕೆ ಆಗಲಿಲ್ಲ! ಆದರೆ ನನ್ನ ಸೂಜಿಗಳು ನಿನ್ನ ಕಣ್ಣುಗಳನ್ನು ಭೇದಿಸಲು ಶಕ್ತವಾದುವು. ಒಂದೇ ಒಂದು ಮಾತು, ಆದರೆ ನಿನ್ನ ಬಾಣ.......

ಚಂದ—(ಮಧ್ಯೆ) ಸುಲ್ತಾನ್, ಪೃಥ್ವೀರಾಜರ ಬಾಣ! ಪೃಥ್ವೀರಾಜರು ಶಬ್ದದ ಮೇಲೆ ಬಾಣ ಪ್ರಯೋಗ ಮಾಡಬಲ್ಲರು.

ಗೋರಿ—ಶಬ್ದದ ಮೇಲೆ! ಮಾಡಬಹುದು!! ಆದರೆ ಈಗ ಕುರುಡರಲ್ಲವೆ!!

ಚಂದ—ಸುಲ್ತಾನ್! ಶಬ್ದದ ಮೇಲೆ ಬಾಣ ಪ್ರಯೋಗ ಮಾಡಲು ಕಣ್ಣುಗಳ ಆವಶ್ಯಕತೆಯಿಲ್ಲ!

ಗೋರಿ—ನಿಜ! (ಆಶ್ಚರ್ಯವನ್ನು ಪ್ರಕಟಿಸುವನು)

ಚಂದ—ನಿಜವಾಗಿಯೂ! ನಾಳೆ ತಮ್ಮ ಅಂಧ ಖೈದಿಯ ಆ ತಮಾಷೆಯನ್ನು ನೋಡಿರಿ! ಇದೇ ನನ್ನ ಬಹುಮಾನ!!

ಗೋರಿ—(ಪೃಥ್ವೀರಾಜನನ್ನು ನೋಡಿ) ಶಾಬಾಸ್! ಖೈದಿ!! (ಚಂದನಿಗೆ) ಒಳ್ಳೆಯದು, ಚಂದ, ನಿನ್ನ ಇಷ್ಟದಂತೆ ಈ ಕುರುಡನ ಬಾಣ ಪ್ರಯೋಗದ ಚಾತುರ್ಯವನ್ನು ನೋಡುತ್ತೇನೆ. ಈಗ ಹೊತ್ತಾಯಿತು. ನೀನು ಬರುವೆಯೋ ನನ್ನ ಜೊತೆಗೆ! ಆತ್ಮಹತ್ಯೆಯ ವಿಷಯವಾಗಿ

ಒಂದು ಕಥೆಯನ್ನು ಹೇಳುವಿಯಂತೆ ಬಾ! ಖೈದಿಯೊಡನಿರುವ ಕಾಲ ಮುಗಿಯಿತು ಇನ್ನು!

ಚಂದ:—ಇದನ್ನು ತಿಳಿಸುವುದು ಸಿಪಾಯಿಯ ಕೆಲಸ. ತಮ್ಮದಲ್ಲ!

ಗೋರಿ:—ನೀನು ಯಾವಾಗಲೂ ನನ್ನನ್ನು ಸುಲ್ತಾನನಿಗೆ ಬದಲಾಗಿ ಸಿಪಾಯಿಯೆಂದೇ ತಿಳಿದುಕೊ! (ದೃಢತೆಯಿಂದ ನಿಂತು ಕೊಳ್ಳುವನು)

ಚಂದ: (ಪೃಥ್ವೀರಾಜನಿಗೆ) ಒಳ್ಳೆಯದು, ನಾನಿನ್ನು ಬರುವೆನು! ಮಹಾ ರಾಜರೇ! ನಮಸ್ಕಾರ.

ಗೋರಿ:— (ವ್ಯಂಗ್ಯದಿಂದ) ಮಹಾ....ರಾಗ! (ಮಹಾ ಎನ್ನುವಾಗ ಜೋರಾಗಿ ಅನ್ನುವನು) ಪೃಥ್ವೀರಾಜ! ಹ್ಹಾ! ಹ್ಹಾ!! ಹ್ಹಾ!!! (ಗಟ್ಟಿಯಾಗಿ) ಅಖ್ತರ್!

(ಸಿಪಾಯಿ ಅಖ್ತರನ ಪ್ರವೇಶ. ಪ್ರವೇಶಿಸಿ ಸಲಾಂ ಮಾಡುವನು.)

ಗೋರಿ:— ಮಹಾರಾಜ ಪೃಥ್ವೀರಾಜನ ಕಣ್ಣುಗಳಲ್ಲಿ ಈ ದಿನ ರಾತ್ರಿ ನಿಂಬೆರಸ ಮತ್ತು ಮೆಣಸಿನ ಕಾಯಿ ಪುಡಿಯನ್ನು ಹಾಕು........ ತಿಳಿಯಿತೇ?

ಪೃಥ್ವೀ:— (ದೃಢ ಸ್ವರದಿಂದ) ನಿಂಬೆ ರಸದೊಡನೆ ಉಪ್ಪೂ ಸೇರಿರಬೇಕು. ತಿಳಿಯಿತೇ?

ಗೋರಿ:— (ಮುಗುಳು ನಗೆ ನಕ್ಕು) ಒಳ್ಳೆಯದು. ಇವನ ಇಚ್ಛೆಯಂತೆ ಮಾಡು. (ಪೃಥ್ವೀರಾಜನಿಗೆ) ಖೈದೀ, ನಾಳೆ ಬೆಳಗ್ಗೆ ಪುನಃ ಬರುವೆನು. ರಾತ್ರಿ ನೀನು ಕಣ್ಣುಗಳಲ್ಲಿ ಉಪ್ಪು ಮೆಣಸಿನ ಕಾಯಿ ಪುಡಿಗಳನ್ನು ಹಾಕಿಸಿಕೊಂಡು ಸುಖವಾಗಿ ನಿದ್ರಿಸು. ತಿಳಿಯಿತೇ. (ಒಂದು ಪಕ್ಕದಲ್ಲಿ ನಿಂತು ಕೊಳ್ಳುತ್ತಾನೆ.)

ಪೃಥ್ವೀ:— ಬಹಳ ಒಳ್ಳೆಯದು! ಗೋರೀ, ಸಲಾಂ ಮಾಡಿ ಹೋಗು, ನಾನು ಬಾದಷಹಾ......

ಗೋರಿ:— ಒಳ್ಳೆಯದು ಖೈದಿ......ಸಲಾಂ.

(ಚಂದನೊಡನೆ ಗರ್ವದಿಂದ ಪ್ರಸ್ಥಾನ. ಪ್ರಥ್ವೀರಾಜ ಸ್ಥಿರಭಾವದಿಂದ ಕುಳಿತು ಕೊಳ್ಳುವನು.)

(ತೆರೆ)

**—: ಸಮಾಪ್ತಂ :—**

| | | | | |
|---|---|---|---|---|
| ಪ್ತಸಾಗರ | (ಎಸ್. ವೆಂಕಟರಾಜ) ಕತೆಗಳು | | 0 | 12 |
| ಜಮಿನ್ದಾರ | (ಹೊಸಮನೆ ಗುಡ್ಡಪ್ಪ) ಕಾದಂಬರಿ | | 1 | 8 |
| ಬಾಳಿನ ಬೆಡಗು | (ಯು. ನಾರಾಯಣ ಭಟ್ಟ) ಕಾದಂಬರಿ | | 1 | 4 |

*ಅಂತರಂಗದ ಪ್ರಕಟಣೆಗಳು*

| | | | | |
|---|---|---|---|---|
| 1 | ೧೯೪೯ರ ಬಿರುದಾವಳಿ (ಪತ್ರಗಳು) | ಎಂ. ವಿ. ಹೆಗ್ಡೆ | 0 | 3 |
| 2 | ಆ ಸುದ್ದಿ (ಕತೆ) | ,, | 0 | 4 |
| 3 | ಹೈದರಾಬಾದ್ ವಿಜಯ (ಯಕ್ಷಗಾನ ನಾಟಕ) | ,, | 0 | 4 |
| 4&5 | ಸೆರೆಯಾಳು (ನೀಳ್ಗತೆ) | ಕುಲಕರ್ಣಿ ಬಿಂದು ಮಾಧವ | 0 | 7 |
| 6 | ಗಾದೆಯ ಗಾಂಧಿ (ಸೂಕ್ಷ್ಮ ಪರಿಚಯ) | ಎಂ. ವಿ ಹೆಗ್ಡೆ | 0 | 3 |
| 7 | ಶಾಂತಿಯ ಮಡಲಲ್ಲಿ (ನೀಳ್ಗತೆ) | ಪ. ಸು. ಭಟ್ಟ | 0 | 4 |
| 8 | ಬಲಿ ಪೀಠದಲ್ಲಿ (ನಾಟಕ) | ಆರ್. ಕಲ್ಯಾಣಮ್ಮ | 0 | 5 |
| 9 | ಅಗಲಿದ ಅಕ್ಕ ಸರೋಜಿನಿ (ಜೀವನ) | ಎಂ. ವಿ. ಹೆಗ್ಡೆ | 0 | 3 |
| 10 | ನನ್ನ ಹೆಂಡತಿ (ಕತೆಗಳು) | ಮಾಳಕೋಡ ನಾರಾಯಣ ಹೆಗ್ಡೆ | 0 | 4 |
| 11 | ಪುಣ್ಯ ಫಲ (ನೀಳ್ಗತೆ) | ಗಿರಿಬಾಲೆ | 0 | 4 |
| 12 | ಸುಖದ ದಾರಿ (ವೈರಾಗ್ಯಶತಕ) | ಕೆ. ಎ. ದೇವದಾಸ | 0 | 3 |
| 13 | ಸುಕಾಂತ (ಕತೆ) | ವೀ. ಚ. ಹಿತ್ತಲಮನಿ | 0 | 4 |
| 14 | ಪಂಚಮುಖಿ (ಪ್ರಬಂಧಗಳು) | ಬಿ. ಎಚ್. ಶ್ರೀಧರ | 0 | 5 |
| 15 | ಜಾತೀ ಭೂತಕ್ಕೆ ಬಲಿ (ಕತೆ) | ಕೆ. ದೇವಕಿ | 0 | 4 |
| 16 | ಜನಸೇವೆಯ ಸೋಗಿನಲ್ಲಿ (ಕತೆ) | ಕೆ. ಶಿವರಾಂ ಶೆಟ್ಟಿ | 0 | 4 |
| 17 | ನಾ ಕಂಡ ಅವಳು (ಕತೆ) | ಶ್ರೀ. ವೆಂ. ಅಡಿಗ, ಶ್ರೀಪತಿ | 0 | 5 |
| 18 | ತ್ರಿವೇಣಿ (ಪ್ರಬಂಧ) | ವಿವಿಧ ಲೇಖಕರು | 0 | 3 |
| 19 | ನಿಲುವಂಗಿ (ಕತೆ) | ಎಸ್. ಸುಬ್ಬರಾಮಯ್ಯ, ಬಿ.ಎ.ಆನರ್ಸ್ | 0 | 4 |
| 20 | ಬಾಡಿಗೆ ಮನೆ ಮತ್ತು ಮುಸುಕು (ನಾಟಕಗಳು) | | 0 | 3 |
| 21 | ವರ್ತಮಾನ ಕಾಲದ ನಾಲ್ವರು ಮಹಾನುಭಾವರು | (ಕು. ಶಿ.) | 0 | 4 |
| 22 | ದೇವರ ನಾಮ ಮತ್ತು ಅದರ ಸಾಧನೆ | (ಬಾಪಟ ವಿನಾಯಕಶರ್ಮ) | 0 | 3 |
| 23 | ಎರಡು ಕತೆಗಳು (ಸಂಕಲನ) | | 0 | 3 |
| 24 | ಸರಸ-ವಿರಸ (ವಿನೋದ ಚಿತ್ರಗಳು) | ಅ. ಗೌ. ಕಿನ್ನಿಗೋಳಿ | 0 | 4 |
| 25 | ಹೃದಯೇಶ್ವರಿ (ಕತೆ) | ಪ್ರೇಮಚಂದ್ರ | 0 | 5 |
| 26-27 | ವಿವಿಧ ವಿಷಯ ಕೋಶ ೧, ೨ | ಟಿ. ಚಂದ್ರರಾಜ ಶೆಟ್ಟಿ | 0 | 6 |
| 28-30 | ನುಡಿ ಮುತ್ತುಗಳು ೧, ೨, ೩ | ಎಂ. ವಿ. ಹೆಗ್ಡೆ | 0 | 9 |
| 31-34 | ಕುಲವಿಲ್ಲದ ಹೆಣ್ಣು (ಕಾದಂಬರಿ) | ಪಿ. ವೆಂಕೋಬಾಚಾರ್ಯ | 2 | 0 |
| 35 | ತವರುಮನೆಯಿಂದ (ಪತ್ರಗಳು) | ಸೌ। ಶಾರದಾ ದೇವಿ | 0 | 4 |
| 36-38 | ಭಾಗ್ಯ ಲಕ್ಷ್ಮಿ (ನಾಟಕ) | ಬೆಳ್ತಂಗಡಿ ಲಕ್ಷ್ಮಣ ರಾವ್ | 1 | 4 |
| 39 | ಯುಗವಾಣಿ (ಕವನಗಳು) | ಕು. ಶಿ. ಹರಿದಾಸ ಭಟ್ | 0 | 8 |
| 40-41 | ಸ್ತ್ರೀ ಹೃದಯ (ಕತೆ) | ವಸಂತಿ ಬಾಯಿ ಪಡುಕೋಣೆ | 0 | 4 |
| 42 | ದ್ವೇಷ (ಕತೆ) | ಶ್ರೀನಿವಾಸ ಮೂರ್ತಿ ಗೊರೂರು | 0 | 4 |
| 43 | ಎರಡು ಏಕಾಂಕ ನಾಟಕಗಳು | ಎಸ್. ವೆಂಕಟರಾಜ | 0 | 4 |
| 44 | ಪ್ರಜಾಪ್ರಭುತ್ವವನ್ನು ಕುರಿತು | ಶಿವರಾಮ ಕಾರಂತ | 0 | 8 |
| 45 | ಕಲಾವಿದನ ದಿನಚರಿ (ಜೀವನ ವಿಮರ್ಶೆ) | ಎಸ್ಸೆಲ್ | 0 | 8 |

| | | | | |
|---|---|---|---|---|
| 46 | ಆಧುನಿಕ ಭಾರತ (ಪ್ರಹಸನಗಳು) | ಹುರುಳಿ ಭೀಮ ರಾವ್ | 0 | |
| 47 | ಕಾಲವೇ ಬದಲಾಗಿದೆ (ಕತೆ) | ಕು. ಶಿ. ಹರಿದಾಸ ಭಟ್ | 0 | |
| 48 | ಭಾರತದ ಸಾಹಿತ್ಯ ಮತ್ತು ಕಲೆಗಳು | ವಿಘ್ನೇಶ್ವರ ಶರ್ಮ | 0 | |
| 49 | ಸ್ತ್ರೀ ಸ್ವಾತಂತ್ರ್ಯ ಬೇಕೆ? (ಪ್ರಬಂಧ) | ವೈದ್ಯ ವಿನಾಯಕ ರಾವ್ | 0 | |
| 50 | ಹಂಬಲ (ಕತೆ) | ಕೃಷ್ಣ ಮೂರ್ತಿ ಕಿತ್ತೂರ | 0 | 4 |
| 51 | ಭಾರತ ಚಿತ್ರದ ಅಂಚೆ ಚೀಟುಗಳು | ಟಿ. ಚಂದ್ರರಾಜ ಶೆಟ್ಟಿ | 0 | 3 |
| 52 | ಅಂತರಂಗದ ಕತೆಗಳು (ಕಥಾಸಂಕಲನ) | | 1 | 4 |
| 53 | ತ್ರಿಶೂಲ (ನಾಟಕಗಳು) | ವಸುದೇವ ಭೂಪಾಲಂ | 0 | 5 |
| 54 | ಪ್ರೇಮ ಪ್ರವಾಹ (ಕಥಾಸಂಗ್ರಹ) | | 0 | 8 |
| 55 | ಪುಸ್ತಕ ಪುರಾಣ | ಕು. ಶಿ. ಹರಿದಾಸ ಭಟ್ | 0 | 4 |
| 56 | ಹಳ್ಳಿಯಲ್ಲಿ ನಡೆದ ನಾಟಕ | ಕೆ. ಎ. ದೇವದಾಸ | 0 | 3 |
| 57 | ನೆರೆಯ ಗಾಂಧಾರ (ಪರಿಚಯ) | ಸುಬ್ರಾವ್ ಕೃಷ್ಣ ಹೆಗ್ಡೆ | 0 | 3 |
| 58 | ಮಾತಿನ ಯುಗದ ಮಹಾಪ್ರಭಾವ | ವಿಘ್ನೇಶ್ವರ ಶರ್ಮ | 0 | 3 |
| 59 | ವಿಜ್ಞಾನದ ಬೆಳವಣಿಗೆ | ಟಿ. ಚಂದ್ರರಾಜ ಶೆಟ್ಟಿ | 0 | 4 |
| 60-61 | ಡಾ। ಹರ್ಡಿಕರ(ಪರಿಚಯ) | ನಾಗೇಶ ರಾಮಚಂದ್ರ ದೇಸಾಯಿ | 0 | 5 |
| 62-63 | ತೆಂಗಿನ ತವರು(ಜಿಲ್ಲಾ ಪರಿಚಯ) | ಯು. ನಾರಾಯಣ ಭಟ್ | 0 | 6 |
| 64-65 | ಪ್ರಾಯಶ್ಚಿತ್ತ (ನಾಟಕಗಳು) | ಎಂ. ಗೋವಿಂದ ರಾವ್, | 0 | 4 |
| 66 | ಪ್ರಭಾ (ನೀಳ್ಗತೆ) | ಕು। ಪದ್ಮಾ | 0 | 4 |
| 67-68 | ಶವಗಳ ಸಾಗಾಟ (ಪತ್ತೇದಾರಿ) | ಸುಬ್ರಾವ್ ಕೃಷ್ಣ ಹೆಗ್ಡೆ | 0 | 12 |
| 69 | ಸ್ವಪ್ನ ಲೋಕ (ಸ್ವಪ್ನಗಳ ಕುರಿತಾದ ವಿವರ) | ಕಾರ್ತಿಕೇಯ | 0 | 8 |
| 70-71 | ಮನೆಯ ಹೊರಗಿನ ಮಹಾಜೀವಗಳು( | ಕು. ಶಿ. ಹರಿದಾಸ್ ಭಟ್ | 0 | 6 |
| 72-75 | ಫಂಟಮಾರಾ (ಇಟಾಲಿಯನ್ ಕಾದಂಬರಿ) | ,, | 2 | 0 |
| 76-77 | ಮಾರ್ಪಾಟ (ನಾಟಕ) | ಡಾ। ಕೃಷ್ಣ | 0 | 5 |
| 78 | ಭಾರತದ ರಾಷ್ಟ್ರಗೀತೆ | ಟಿ. ಚಂದ್ರರಾಜ ಶೆಟ್ಟಿ | 0 | 3 |
| 79 | ಆದರ್ಶ ಆರೋಗ್ಯ ಖಾತೆ | ವಿನಾಯಕ ರಾವ್ ಬಾಪಟ | 0 | 2 |
| 80 | ನಮ್ಮ ಬಹು ದೊಡ್ಡ ಶತ್ರು (ಪ್ರಬಂಧ) | ಕೆ. ಶಿವರಾಮ ಶೆಟ್ಟಿ | 0 | 4 |
| 81 | ಚೌತಿ (ನಾಟಕಗಳು) | | 0 | 4 |
| 82 | ಕತ್ತು ಕೊಯ್ದವರಾರು(ಪತ್ತೆದಾರಿ) | ಕೆ. ಎಸ್. ರಾಮಕೃಷ್ಣ ಮೂರ್ತಿ | 0 | 6 |
| 83 | ಕೈಲಾಸ (ಕತೆ) | ಟಿ. ಚಂದ್ರರಾಜ ಶೆಟ್ಟಿ | 0 | 2 |
| 84 | ಸಮಾಜದ ಅಗ್ನಿಕುಂಡ (ನೀಳ್ಗತೆ) | ಪಡುಕೋಣೆ ವಸಂತಿ ಬಾಯಿ | 0 | 4 |
| 85 | ಬೆಳ್ಳಿ ಹಬ್ಬ (ರಜತೋತ್ಸವ ಸಂಚಿಕೆ) | | 0 | 4 |
| 86 | ಉಷಾ (ಕಾದಂಬರಿ) | ಕು। ಪದ್ಮಾ | 0 | 4 |
| 87 | ವಿಧಿ ಲೀಲೆ (ನೀಳ್ಗತೆಗಳು) | ಜಿ. ಮೈಲಾರ್ರಾವ್ | 0 | 4 |
| 88 | ಪರಮಾಣು ಪ್ರಪಂಚ(ಲಲಿತಪ್ರಬಂಧಗಳು) | ಕೆ. ಗುರುರಾಜ ಉಡುಪ | 0 | 4 |
| 89 | ನೀತಿ ವಿನೋದ ಕತೆಗಳು | ವೀರಪ್ಪ ಯಗಟಿ | 0 | 12 |
| 90 | ಸಾಹಸ ಭೀಮ ವಿಜಯ (ಯಕ್ಷಗಾನ) | ಕೆ. ಪಿ. ವೆಂಕಪ್ಪ ಶೆಟ್ಟಿ | 0 | 8 |
| 91 | ಭಾರತದ ಗುರುಕುಲ ( ,, ) | ,, | 0 | 6 |
| 92 | ಲತ್ತಪಗಡೆ (ಯಕ್ಷಗಾನ) | ಕೆ. ಪಿ. ವೆಂಕಪ್ಪ ಶೆಟ್ಟಿ | 0 | 6 |
| 93 | ಸೇವಾಪಥ (ನಾಟಕ) | [illegible] ಗೋವಿಂದ ದಾಸ | 0 | 8 |

ರತೀಶ ದಿಗ್ವಿಜಯ (ಪ್ರಸಂಗ) ಕೆ. ಪಿ. ವೆಂಕಪ್ಪ ಶೆಟ್ಟಿ
ಸನೋಪದೇಶ (ಮನಾಚೆ ಶ್ಲೋಕ) ವಿನಾಯಕ ರಾವ್ ಬಾಪಟ
ಜೀವನ ಕಲೆ (ಬಾಳ ಕೈದೀಪಿಗೆ) ಗ. ನಾ. ಪಂಡಿತ
ಪ್ರತಿಜ್ಞಾ ಪೂರ್ತಿ (ನಾಟಕ) ಸುಬ್ರಾಯ್ ಕೃಷ್ಣ ಹೆಗ್ಡೆ
ಮಿತ ಸಂತತಿ (ಸಂತತಿ ಸಂಯಮನ)
9 ಗುಪ್ತರೋಗ ನಿವಾರಣೆ (ಸ್ತ್ರೀಪುರುಷರ ಆರೋಗ್ಯರಕ್ಷಣೆಯ ಕೈಪಿಡಿ
100 ಸೌಂದರ್ಯ (ಕತಾಚಿತ್ರಗಳು) ವೈ. ರಾಮ ತಂತ್ರಿ
101 ಸುಧಾ (ಕಾದಂಬರಿ) ಬಿ. ಪದ್ಮಾ ಬಾಳಿಗ
102 ವಸಂತಕಾಲ (ಲಲಿತ ಪ್ರಬಂಧಗಳು) ಕೆ. ಗುರುರಾಜ ಉಡುಪ
103 ನವೀನ ನಾಟಕಗಳು (ನಾಟಕ ಸಂಗ್ರಹ) 0
104 ಪರ್ಲ್ ಎಸ್. ಬಕ್ (ಜೀವನ ಚರಿತ್ರೆ) ಯು. ನಾರಾಯಣ ಭಟ್ 0
105 ಶಿಲ್ಪಿ (ಐತಿಹಾಸಿಕ ನಾಟಕ) ಹುಲಿಮನೆ ಕಾಳೆ ತಿಮ್ಮಪ್ಪ ಹೊಸಮನೆ 1
106 ವಾಲಿ ಸುಗ್ರೀವ (ಯಕ್ಷಗಾನ) ಕೆ. ಪಿ. ವೆಂಕಪ್ಪ ಶೆಟ್ಟಿ 0
107 ಪಂಚಾರತಿ (ನಾಟಕ ಸಂಗ್ರಹ) 0

* ಇತರ ಪುಸ್ತಕಗಳು *

1 ನೆನಪಿಗಾಗಿ (ಪ್ರಬಂಧಗಳು) ಕೊರಡ್ಕಲ್ ಸ್ಮಾರಕ ಗ್ರಂಥ 2
2 ಸುಲಭದಲ್ಲಿ ಇಂಗ್ಲಿಷ್ (ಇಂಗ್ಲಿಷ್ ಸ್ವಯಂಬೋಧಿನಿ) 1
3 ಲೋಪಾಮುದ್ರೆ (ಕಾದಂಬರಿ) 0
4 ಪ್ರತೀಕಾರ (ನಾಟಕ) ರಂಗನಾಥ 0
5 ಶಂಭುಕ ವಧೆ (ನಾಟಕ) ಎನ್. ಎಸ್. ಜೈನಿ 0
6 ಮುಗಳು (ಪದ್ಯಸಂಗ್ರಹ) ಕೆ. ಹೊನ್ನಯ್ಯ ಶೆಟ್ಟಿ 0
7 ಸರಸ್ವತಿ (ನಾಟಕ) ಡಾ। ಎಂ. ಮಾಧವಾಚಾರ್ಯ 0
8 ಮನೆಮದ್ದು (ಗೃಹವೈದ್ಯ) ಡಾ। ಕೊರಡ್ಕಲ್ ವೆಂಕಟರಾವ್ 2
9 ವೈಯಕ್ತಿಕ ಆರೋಗ್ಯ ವಿನಾಯಕ ರಾವ್ ಬಾಪಟ 0
10 ಗೀತೆಯ ಕೈಗನ್ನಡಿ ಹೊಸಕೆರೆ ಚಿದಂಬರಯ್ಯ 0
11 ವ್ಯವಹಾರಜ್ಞಾನ ದರ್ಪಣ 1
12 ವತ್ಸಲಾ (ಕಾದಂಬರಿ) ಮಟ್ಪಾಡಿ ಕಮಲಾಕ್ಷಿ 0
13 ಅಳಿಯ ಸಂತಾನ ಕಾನೂನು 0
14 ಕಿಲ್ಲೆ ಸ್ಮಾರಕ ಗ್ರಂಥ ವಿವಿಧ ಲೇಖಕರು 1
15 ಪಂಚಗಜ್ಜಾಯ (ನೀಳ್ಗತೆಗಳ ಸಂಗ್ರಹ) 1
16 ಅವಿಲು (ಸಾಹಿತ್ಯದ ಸರ್ವ ವಿಧದ ಸಂಗ್ರಹ) 2
17 ಹೆಂಗುಸರ ಕತೆಗಳು (ಸ್ತ್ರೀಯರಿಂದಲೇ ಬರೆಯಲ್ಪಟ್ಟ ಕತೆಗಳು) 2
18 ಧನದ ಬಿಂದಿಗೆ ಮತ್ತಿತರ ನಾಟಕಗಳು 1
19 ಗೋಳಿನ ಬಾಳು (ಕಾದಂಬರಿ) ಪಿ. ದಯಾನಂದ ನ್ಯಾಕ 0
20 ಭಾರತದ ಕರ್ಣ ಎನ್. ಎಸ್. ಕಿಲ್ಲೆ 0
21 ಪ್ರಾಚೀನ ತುಳುನಾಡು ,, 2
22 ಮುರಲಿ ,, 0

(ಇತರ ಕಡೆಯ ಪುಸ್ತಕಗಳೂ ದೊರೆಯುತ್ತವೆ)

---

ನವಭಾರತ ಪುಸ್ತಕ ಭಂಡಾರ, ಉಡುಪಿ, (ಅಥವಾ)